ಮತ್ತು ಬಾಪು 150ನೇ ಜನ್ಮ ವರ್ಷಾಚರಣೆ ಪುಸ್ತಕ ಮಾಲಿಕೆ

# ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ

ಡಾ. ಎಚ್.ಎಸ್. ದೊರೆಸ್ವಾಮಿ

ಬಾ-ಬಾಪು 150ನೇ




ವರ್ಷಾಚರಣೆ ಪುಸ್ತಕ ಮಾಲಿಕೆ

# ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ

ಡಾ. ಎಚ್.ಎಸ್. ದೊರೆಸ್ವಾಮಿ

ಪ್ರಕಾಶಕರು

**ಕರ್ನಾಟಕ ಗಾಂಧೀ ಸ್ಮಾರಕ ನಿಧಿ**

ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ

ಬೆಂಗಳೂರು - 560001, ದೂರವಾಣಿ : 080-22261967

ಇಮೇಲ್ : gandhibhavanabengaluru@gmail.com

ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ
ಲೇಖಕರು : ಡಾ. ಎಚ್.ಎಸ್. ದೊರೆಸ್ವಾಮಿ
ಪ್ರಕಾಶಕರು : ಕರ್ನಾಟಕ ಗಾಂಧೀ ಸ್ಮಾರಕ ನಿಧಿ
ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560001, ದೂರವಾಣಿ : 080–22261967



| | | |
|---|---|---|
| ಮೊದಲ ಮುದ್ರಣ | : | 2021 |
| ಪ್ರತಿಗಳು | : | 1000 |
| ಪುಟಗಳು | : | XVI + 110 |
| ಬೆಲೆ | : | ರೂ. 92/– |
| ಸಹಕಾರ | : | ರಾಷ್ಟ್ರೀಯ ಸೇವಾ ಯೋಜನೆ |
| ಮುದ್ರಕರು | : | ಕ್ರಿಯೇಟಿವ್‌ಗೀಕ್ಸ್<br>ಯಾದವ ಕಾಲೇಜು ರಸ್ತೆ<br>ಮಾಧವನಗರ, ಬೆಂಗಳೂರು–560001<br>ದೂರವಾಣಿ : 080 40927049 |



## ಅರ್ಪಣೆ

ಅಹಿಂಸಾ ತತ್ವವನ್ನು ವಿಶ್ವಮಾನ್ಯವಾಗಿಸಿದ

# ಮಹಾತ್ಮ ಗಾಂಧೀಜಿ

ಅವರಿಗೆ ಗೌರವಪೂರ್ವಕವಾಗಿ



ನಿಜವಾದ ಪ್ರೀತಿ ವ್ಯಕ್ತವಾಗುವುದು
ಹೊಗಳಿಕೆಯಿಂದಲ್ಲ, ಸೇವೆಯ ಮುಖಾಂತರ.
ಆತ್ಮ ಶುದ್ಧೀಕರಣವು ನಿಜವಾದ ಸೇವೆಯ
ಪ್ರಾಸ್ತಾವಿಕ ವಿಧಾನವಾಗಿರುವುದು ಅವಶ್ಯಕ
ಸಂಗತಿಯಾಗಿರುವುದು.

– ಮಹಾತ್ಮ ಗಾಂಧೀಜಿ

# ನಿಮ್ಮೊಡನೆ

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ಬಾ ಮತ್ತು ಬಾಪು ಅವರ 150ನೇ ವರ್ಷಾಚರಣೆಯನ್ನು ಅರ್ಥಪೂರ್ಣವಾಗಿ ಆಚರಿಸಲು ಹಾಕಿಕೊಂಡಿರುವ ಹಲವಾರು ಕಾರ್ಯ ಯೋಜನೆಗಳಲ್ಲಿ, ಗಾಂಧೀಜಿ ಅವರ ಚಿಂತನೆಗಳು ಮತ್ತು ತತ್ವ ಸಿದ್ಧಾಂತಗಳುಳ್ಳ ಸಾಹಿತ್ಯವನ್ನು ಪ್ರಕಟಿಸುವುದು, ಪ್ರದರ್ಶಿಸುವುದು ಮತ್ತು ವಿತರಿಸುವುದೂ ಪ್ರಮುಖವಾದುದಾಗಿದೆ. ಸ್ವಾತಂತ್ರ್ಯೋತ್ಸವ 75ರ ವರ್ಷಾಚರಣೆ ಸಂದರ್ಭದಲ್ಲಿ ನಮ್ಮ ನಾಡಿನ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾದ ಡಾ. ಎಚ್.ಎಸ್. ದೊರೆಸ್ವಾಮಿ ಅವರ "ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ" ಕೃತಿಯನ್ನು ಪ್ರಕಟಿಸಲು ಹೆಮ್ಮೆ ಎನಿಸುತ್ತದೆ.

ಈ ಕೃತಿಯನ್ನು ಪ್ರಕಟಿಸಲು ಸಂತೋಷವೆನಿಸಿದರೂ, ಮುದ್ರಣ ಅಂತಿಮವಾಗುವ ವೇಳೆ ಅವರಿಲ್ಲದ ದಿನಗಳು ಬಂದವಲ್ಲಾವೆಂದು ದುಃಖ ಮಡುಗಟ್ಟಿದೆ. ಕೋವಿಡ್-19, ಕಳೆದೆರಡು ವರ್ಷಗಳನ್ನು ಸರ್ವವ್ಯಾಪಿ ಆಗಿರದಿದ್ದರೆ ಈ ಕೃತಿ ಅವರ ಸಮ್ಮುಖದಲ್ಲಿ ಲೋಕಾರ್ಪಣೆಗೊಳ್ಳುತ್ತಿತ್ತು ಎಂದು ಹೃದಯದ ಧ್ವನಿ ಹೇಳುತ್ತಿದೆ. ಹೀಗಿದ್ದೂ ಗಾಂಧಿ ಭವನ ಮತ್ತು ಅಲ್ಲಿನ ಪದಾಧಿಕಾರಿಗಳು, ಅದರಲ್ಲೂ ಗಾಂಧಿ ಭವನದ ಕಾರ್ಯದರ್ಶಿ ಅವರ ಮೇಲೆ ಅಪಾರ ಭರವಸೆ, ವಿಶ್ವಾಸಗಳನ್ನಿಟ್ಟು ಅವರೊಂದಿಗೆ ಯಾವಾಗಲೂ ಸಂಪರ್ಕದಲ್ಲಿದ್ದು, ಈ ಕೃತಿ ಅಂತಿಮ ಹಂತಕ್ಕೆ ತರಲು, ಅವರ ಅಪಾರ ಸ್ಫೂರ್ತಿ ಮತ್ತು ನೆನಪಿನ ಶಕ್ತಿಗೆ ನಾವೆಲ್ಲರೂ ಮುಕ್ತಕಂಠದಿಂದ ಶ್ಲಾಘಿಸಬೇಕಿದೆ.

ಎಚ್.ಎಸ್. ದೊರೆಸ್ವಾಮಿ ಅವರ 104 ವರ್ಷದ ವಯೋಮಾನದಲ್ಲಿ ಬರವಣಿಗೆ ಮತ್ತು ಮೂರು ಹಂತದ ತಿದ್ದುಪಡಿಗಳನ್ನು ಸ್ವಂತ

ಕೈಬರಹದಲ್ಲಿ ಮಾಡಿರುವುದು ಅತ್ಯಾಶ್ಚರ್ಯಕರವಾದ ವಿಷಯವಾಗಿದೆ. ಅವುಗಳ ಕೆಲವು ಭಾಗಗಳನ್ನು ಪುಸ್ತಕದ ಕಡೆ ಭಾಗದಲ್ಲಿ ಮಾಹಿತಿಗಾಗಿ ಮತ್ತು ದಾಖಲೆಗಾಗಿ ಸೇರ್ಪಡೆ ಮಾಡಿಕೊಳ್ಳಲಾಗಿದೆ. ಜಗತ್ತಿನಲ್ಲಿ ಕೆಲವರು 106 ವರ್ಷ, 112 ವರ್ಷ, 120 ವರ್ಷ ಬದುಕಿದ ದಾಖಲೆಗಳಿವೆ. ಆದರೆ ಅಂಥಹ ವಯೋಮಾನದ ಹಂತದಲ್ಲಿ ಇದ್ದ ದೊರೆಸ್ವಾಮಿ ಅವರು ಯೌವ್ವನದ ದಿನಗಳ ಹೋರಾಟ, ಸಾರ್ವಜನಿಕ ಜೀವನದ ಪ್ರತಿ ಘಟ್ಟಗಳನ್ನು ಕರಾರುವಾಕ್ಕಾಗಿ ದಿನಾಂಕ ಮತ್ತು ಸ್ಥಳ ಹಾಗೂ ಭಾಗಿಗಳಾದವರ ಹೆಸರುಗಳೊಂದಿಗೆ ಕೃತಿರೂಪಕ್ಕೆ ತಂದಿರುವುದು ಸಖೇದಾಶ್ಚರ್ಯಕರವಾದುದಾಗಿದೆ. ಅಂಥಹ ಅದ್ಭುತ ಸ್ಮರಣ ಶಕ್ತಿಯ ಡಾ. ದೊರೆಸ್ವಾಮಿ ಅವರು ಈ ಕೃತಿಯನ್ನು ಗಾಂಧಿ ಭವನದಿಂದ ಪ್ರಕಟಣೆಗೆ ಕೊಟ್ಟು ನಮಗೆಲ್ಲರಿಗೂ ಉಪಕಾರ ಮಾಡಿದ್ದಾರೆ.

ಈ ಕೃತಿಯಲ್ಲಿ ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕದ ಪಾತ್ರ, ಇಲ್ಲಿ ನಡೆದ ಚಳುವಳಿಗಳು, ಜನಸಾಮಾನ್ಯರ ಪಾತ್ರ, ಹೋರಾಟವನ್ನು ಮುನ್ನೆಡೆಸಿದ ಹಿರಿಯರು ಹಾಗೂ ಯುವಕರು ಮತ್ತು ಮಹಿಳೆಯರ ಭಾಗಿತ್ವವನ್ನು ವಿವರವಾಗಿ ವಿವರಿಸಲಾಗಿದೆ. ಬಹಳ ಮುಖ್ಯವಾಗಿ ಗಮನಿಸಬೇಕಾದ ವಿಚಾರವೆಂದರೆ, ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ದೊರೆಸ್ವಾಮಿ ಅವರ ಪಾತ್ರವನ್ನು ಎಲ್ಲಿಯೂ ವೈಭವೀಕರಿಸದೆ, ಹೋರಾಟಗಾರರ ಸಾಲಿನಲ್ಲಿ ಮಾತ್ರ ಸೇರಿಸಿರುವುದು, ವಿವರಿಸಿರುವುದು ಅವರ ನಿಸ್ವಾರ್ಥತೆ, ನಿಸ್ಪೃಹತೆಗೆ ನಿದರ್ಶನವಾಗಿದೆ. ಅವರ ಹೋರಾಟದ ವಿವರವನ್ನೇ ಒಂದು ಅಧ್ಯಾಯ ಮಾಡಲು ಅವಕಾಶವಿದ್ದಿತ್ತು ಆದರೆ ದೊರೆಸ್ವಾಮಿ ಅವರು ಸರ್ವರೊಂದಿಗೆ ನನ್ನದೊಂದು ಅಳಿಲು ಸೇವೆ ಎಂಬಂತೆ ಸ್ವಾತಂತ್ರ್ಯ ಹೋರಾಟದ ವಿವಿಧ ಚಳುವಳಿಗಳಲ್ಲಿ ಭಾಗಿಯಾಗಿದ್ದನ್ನು ಸೂಚ್ಯವಾಗಿ ಹೇಳಿದ್ದಾರೆ. ಈ ಕೃತಿಯನ್ನು ಓದಿದವರೆಲ್ಲರೂ ಭಾರತದ ಸ್ವಾತಂತ್ರ್ಯ ಹೋರಾಟ

ಹಾಗೂ ಕರ್ನಾಟಕದ ವಿಮೋಚನಾ ಚಳುವಳಿಯ ನೋವು, ದುಃಖ, ಸಂಕಷ್ಟಗಳನ್ನು ಮನಗಂಡು ಇಂದಿನ ಭಾರತವನ್ನು ಅಖಂಡವಾಗಿ ಕಟ್ಟಲು, ಉಳಿಸಿಕೊಳ್ಳಲು ಸದಾ ಕ್ರಿಯಾಶೀಲರಾಗಿರಬೇಕೆಂಬ ಜಾಗೃತಿಯನ್ನು ಮೂಡಿಸುತ್ತದೆ.

ಈ ಕೃತಿಯನ್ನು ಲೋಕಾರ್ಪಣೆ ಮಾಡಲು ಸಿದ್ಧಗೊಳಿಸಿದ ಗಾಂಧಿ ಭವನದ ಗೌ. ಕಾರ್ಯದರ್ಶಿ, ಶ್ರೀಮತಿ ಇಂದಿರಾ ಕೃಷ್ಣಪ್ಪ ಅವರಿಗೆ ನನ್ನ ಅಭಿನಂದನೆಗಳು ಸಲ್ಲುತ್ತವೆ. ಈ ಕೃತಿಯನ್ನು ಪ್ರಕಟಿಸಲು ಸಹಕರಿಸಿದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಎಲ್ಲಾ ಸದಸ್ಯರುಗಳಿಗೂ ಕೃತಜ್ಞತೆಗಳು ಸಲ್ಲುತ್ತವೆ. ಇದನ್ನು ಅಂದವಾಗಿ ಮುದ್ರಿಸಿದ ಕ್ರಿಯೇಟಿವ್‌ಗೀಕ್ಸ್‌ನ ಮಹೇಶ್ ಮತ್ತು ತಂಡಕ್ಕೆ ಆತ್ಮೀಯ ನಮನಗಳು.

ಡಾ. ವೂಡೇ ಪಿ. ಕೃಷ್ಣ
ಅಧ್ಯಕ್ಷರು
ಕರ್ನಾಟಕ ಗಾಂಧೀ ಸ್ಮಾರಕ ನಿಧಿ



ನಿಶ್ಚಲವಾದ ಚೈತನ್ಯವುಳ್ಳ ಸಣ್ಣ ಗುಂಪು ತನ್ನ ಗುರಿಯ ಬಗ್ಗೆ ದೃಢ ನಂಬಿಕೆ ಇಟ್ಟು ಹೊರಟರೆ ಇತಿಹಾಸದ ಗತಿಯನ್ನೇ ಬದಲಿಸಬಹುದು.

- ಮಹಾತ್ಮ ಗಾಂಧಿ

# ನಮ್ಮ ನಮ್ಮಲ್ಲಿ

ಬಾ ಮತ್ತು ಬಾಪು ಅವರ 150ನೇ ವರ್ಷಾಚರಣೆ ಮಾಲಿಕೆ ಮತ್ತು ಇದೀಗ ಸ್ವಾತಂತ್ರ್ಯೋತ್ಸವ – 75ರ ವರ್ಷಾಚರಣೆಯ ಸಂದರ್ಭದಲ್ಲಿ ಕೃತಿಯನ್ನು ಲೋಕಾರ್ಪಣೆ ಮಾಡಲು ಹರ್ಷವಾಗುತ್ತಿದೆ. ಭಾರತದ ಸ್ವಾತಂತ್ರ್ಯ ಹೋರಾಟದ ಕುರಿತಾಗಿ, ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರರಾದ ಡಾ. ಎಚ್.ಎಸ್. ದೊರೆಸ್ವಾಮಿ ಅವರೇ ಬರೆದ ಕೃತಿಯನ್ನು ಪ್ರಕಟಿಸಲು ನಮಗೆ ಹೆಮ್ಮೆಯೆನಿಸುತ್ತಿದೆ.

ಈ ಎಲ್ಲಾ ಹರ್ಷ–ಹೆಮ್ಮೆಗಳ ನಡುವೆ ಕೃತಿ ಲೋಕಾರ್ಪಣೆ ಮಾಡುವ ಸಂದರ್ಭದಲ್ಲಿ ಅವರಿಲ್ಲವಲ್ಲ ಎಂಬ ಕೊರಗು ಹೃದಯವನ್ನು ತಲ್ಲಣಗೊಳಿಸುತ್ತಿದೆ. ನಮ್ಮೆಲ್ಲರ ಸ್ಫೂರ್ತಿಯ, ಚೈತನ್ಯದ ಗುರುವಾದ ದೊರೆಸ್ವಾಮಿ ಅವರು 104 ವರ್ಷದ ವಯೋಮಾನದಲ್ಲಿ ಅವರ ಬಾಲ್ಯ, ಯೌವನ, ಮಧ್ಯ ವಯಸ್ಕರಾಗಿದ್ದಾಗ ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡ ಪ್ರತಿ ಹಂತದ ಹೋರಾಟದ ಚಿತ್ರಣ ವಿವರಣಾತ್ಮಕವಾಗಿ ಮನಮುಟ್ಟುವಂತೆ ಚಿತ್ರಿಸಿದ್ದಾರೆ. ಅಂದಿನ ಪ್ರಜಾ ಜನಗಳಲ್ಲಿದ್ದ ಉತ್ಸಾಹ, ತ್ಯಾಗ, ದೇಶಪ್ರೇಮ ಮತ್ತು ಸಮರ್ಪಣ ಭಾವವನ್ನು ಇಲ್ಲಿ ಕಟ್ಟಿಕೊಟ್ಟಿದ್ದಾರೆ.

ಕರುನಾಡಿನಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸವನ್ನು 1760ರಿಂದ ಆರಂಭಿಸಿ 1948 ರವರೆಗಿನ ಚರಿತ್ರೆಯನ್ನು 4 ಹಂತದಲ್ಲಿ ವಿವರಿಸಲಾಗಿದೆ. ಈ ನಾಡಿನ ಕುಲ ಪುರೋಹಿತರೆಂದೇ ಖ್ಯಾತರಾದ ಆಲೂರು ವೆಂಕಟರಾಯರಿಂದ ಹಿಡಿದು ಮಹಾತ್ಮ ಗಾಂಧೀಜಿಯವರೆಗೆ ನಡೆದ ಚಳುವಳಿಗಳು ಇಲ್ಲಿ ದಾಖಲಾಗಿದೆ. ಸ್ವಾತಂತ್ರ್ಯ ಹೋರಾಟಗಾರರೇ ಆಗಿದ್ದ ಡಾ. ದೊರೆಸ್ವಾಮಿ ಅವರೇ ಸ್ವಂತ ಕೈ ಬರಹದಿಂದ ಬರೆದಿರುವುದರಿಂದ ಇದು ಸತ್ಯ, ಪಾರದರ್ಶಕ, ಪ್ರಾಮಾಣಿಕ ದಾಖಲೆಯಾಗಿದೆ.

ಗಾಂಧಿ ಭವನದ ಮೇಲಿನ ಅಪಾರ ವಿಶ್ವಾಸದಿಂದ ಡಾ. ದೊರೆಸ್ವಾಮಿ ಅವರು ಈ ಕೃತಿಯನ್ನು ಪ್ರಕಟಣೆಗಾಗಿ ಗಾಂಧಿ ಭವನಕ್ಕೆ ಕೊಟ್ಟಿರುವುದು ಅಲ್ಲದೇ ಲೇಖಕರ ನುಡಿಯಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ಡಾ. ವೂಡೇ ಪಿ. ಕೃಷ್ಣ ಅವರಿಗೆ ಹಾಗು ನನಗೆ ವಂದನೆಗಳನ್ನೂ, ಕೃತಜ್ಞತೆಗಳನ್ನು ತಿಳಿಸಿರುವುದನ್ನು ಓದಿದಾಗ, ಧನ್ಯತೆಯ ಭಾವದಿಂದ ಕಣ್ಣುಗಳು ತೇವಗೊಂಡವು. ಅಂಥಹ ಧೀಮಂತ ವ್ಯಕ್ತಿಯಿಂದ ಆಶೀರ್ವಾದದ ಅವಕಾಶ ದೊರಕಿದ್ದು ನನ್ನಲ್ಲಿ ಸಾರ್ಥಕತೆಯ ಭಾವ ಮೂಡಿಸಿದೆ.

ಭಾರತದ ಗಣರಾಜ್ಯದಲ್ಲಿ ಒಂದಾದ ಕರ್ನಾಟಕದ ಜನರ ಪಾತ್ರ ಮತ್ತು ಮಹಿಳೆಯರ ಪಾಲ್ಗೊಳ್ಳುವಿಕೆಯ ಚಿತ್ರಣವನ್ನೂ ಇಲ್ಲಿ ದಾಖಲಿಸಲಾಗಿದೆ. ಇದರೊಂದಿಗೆ ಅವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗಿಯಾದ ವಿವರಣೆಯನ್ನು ಎಲ್ಲಿಯೂ ವಿಜೃಂಭಿಸದೆ ಎಲ್ಲರೊಂದಿಗೆ ಸಹಭಾಗಿಯಾದ ವಿವರಣೆಗಳು ಇಲ್ಲಿ ದಾಖಲಾಗಿದೆ. ಇದು ಲೇಖಕರ, ನಿಸ್ವಾರ್ಥತೆ, ಎಲ್ಲರೊಳಗೊಂದಾಗುವ ಸರಳ ಭಾವದ ಅಭಿವ್ಯಕ್ತಿಯಾಗಿದೆ.

ಈ ಕೃತಿಯು ಒಂದು ಚರಿತ್ರಾರ್ಹ ದಾಖಲೆ. ಇದು ಶಾಲಾ-ಕಾಲೇಜುಗಳಲ್ಲಿ ಪಠ್ಯ ಪುಸ್ತಕವಾಗಿಸುವ, ಪಠ್ಯದ ಭಾಗವಾಗಿಸುವಂಥಹದಾಗಿದೆ. ಇದನ್ನು ಸರ್ಕಾರಗಳು ಅವಲೋಕಿಸಬೇಕಾಗಿದೆ ಮತ್ತು ಸಂಬಂಧಪಟ್ಟವರು ಇದಕ್ಕಾಗಿ ಪ್ರಯತ್ನಿಸುವುದು ಸಕಾಲಿಕ ಕ್ರಮವಾಗಿದೆ.

ಇದನ್ನು ಕೃತಿಯಾಗಿಸುವ ಘಟ್ಟದ ಕಳೆದ 3-4 ತಿಂಗಳಲ್ಲಿ ಅವರೊಡನೆ ಆಗಾಗ್ಗೆ ಮಾತನಾಡುವ ಸಂದರ್ಭಗಳು ಬಂದಿದ್ದವು. ಕರಡು ತಿದ್ದಪಡಿ ಮಾಡುವ ಸಂದರ್ಭದಲ್ಲಿ ಅವರೇ ಖುದ್ದು, ಮಾಡುವುದಾಗಿ ಹೇಳಿದಲ್ಲದೆ, ಸ್ವಂತ ಕೈ ಬರಹದಲ್ಲಿ ತಿದ್ದುಪಡಿಗಳನ್ನು ಮಾಡಿರುವಂಥದ್ದು, ಅವರ ಸ್ಮರಣ ಶಕ್ತಿ, ವರ್ತಮಾನದ ಪರಿಜ್ಞಾನ ಮತ್ತು ಕಾರ್ಯಪ್ರವೃತ್ತಿಗೆ ನಿದರ್ಶನವಾಗಿದೆ. ಆದ್ದರಿಂದಲೇ ಅವರು ಮಾಡಿರುವ ಸ್ವ ಅಕ್ಷರದ ತಿದ್ದುಪಡಿಗಳ ಭಾಗವನ್ನು ಮಾದರಿಯಾಗಿ ಇದರಲ್ಲಿ ಜೋಡಿಸಲಾಗಿದೆ.

ಸರಳ ಸಜ್ಜನ, ಪ್ರಾಮಾಣಿಕತೆಯ ಮೇರು ಪರ್ವತವೇ ಆಗಿರುವ ಎಚ್.ಎಸ್. ದೊರೆಸ್ವಾಮಿ ಅವರ ಕೃತಿ ವರ್ತಮಾನದ ಯುವಜನರು, ಮಹಿಳೆಯರು, ಹೋರಾಟಗಾರರಿಗೆ ಪ್ರೇರಣೆಯ ಕೃತಿಯಾಗಿದೆ. ಭಾರತದ ಪ್ರಜೆಗಳಾದ ನಾವೆಲ್ಲ ಹೇಗಿರಬೇಕೆಂಬ ಬಗ್ಗೆ ಅವರ ಜೀವನವೇ ನಿದರ್ಶನವಾಗಿದೆ. ಅವರು ನ್ಯಾಯದ, ಸಮತೆಯ ಜ್ಯೋತಿಯಾಗಿ ನಮ್ಮ ಹೃದಯದಲ್ಲಿ ಸದಾ ಜಾಗೃತಿ ಮೂಡಿಸುತ್ತಿರುತ್ತಾರೆಂಬ ಕೃತಜ್ಞತಾ ಭಾವ ನನಗಿದೆ.

ಈ ಕೃತಿಯನ್ನು ಪ್ರಕಟಿಸಲು ಸಹಕರಿಸಿದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಎಲ್ಲಾ ಸದಸ್ಯರುಗಳಿಗೂ ಕೃತಜ್ಞತೆಗಳು ಸಲ್ಲುತ್ತವೆ. ಇಂತಹ ಅಪೂರ್ವ ಕೃತಿಗಳನ್ನು ಈ ಸ್ವಾತಂತ್ರ್ಯೋತ್ಸವ ವರ್ಷಾಚರಣೆಯಲ್ಲಿ ಪ್ರಕಟಿಸಲು ಸದಾ ಉತ್ಸುಕರಾಗಿರುವ ಗಾಂಧೀ ಭವನದ ಅಧ್ಯಕ್ಷರಾಗಿರುವ ಡಾ. ವೂಡೇ ಪಿ. ಕೃಷ್ಣ ಅವರಿಗೆ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ. ಈ ಕೃತಿಯ ಪರಿಷ್ಕರಣೆ ಮತ್ತು ಕರಡು ತಿದ್ದುಪಡಿಗೆ ಸಹಕರಿಸಿದ ಶ್ರೀ ಇಂದ್ರಕುಮಾರ್ ಅವರಿಗೂ ಹಾಗೂ ಇದನ್ನು ಅಂದವಾಗಿ ಮುದ್ರಿಸಿದ ಕ್ರಿಯೇಟಿವ್‌ಗೀಕ್ಸ್‌ನ ಮಹೇಶ್ ಮತ್ತು ತಂಡದವರಿಗೆ ಆತ್ಮೀಯ ನಮನಗಳು.

ಇಂದಿರಾ ಕೃಷ್ಣಪ್ಪ
ಗೌ॥ ಕಾರ್ಯದರ್ಶಿ



ಸುಖ-ಸಂತೋಷಗಳಿಲ್ಲದೇ ಮಾಡಿದ ಸೇವೆಯು
ಸೇವಕನಿಗೂ ಸೇವ್ಯನಿಗೂ ಉಪಯುಕ್ತವಿರುವದಿಲ್ಲ.
ಆದರೆ ಸಂತೋಷದಿಂದ ಸಲ್ಲಿಸಿದ ಸೇವೆಯಲ್ಲಿ ಎಲ್ಲವೂ
ಅಡಗಿರುತ್ತದೆ, ಉಪಯುಕ್ತವೆನಿಸುತ್ತದೆ. ಅದರೆದುರು
ಸ್ಥಾನಮಾನಗಳು, ಸುಖವು ಮಹತ್ವದ್ದೆನಿಸುವುದಿಲ್ಲ.

– ಮಹಾತ್ಮ ಗಾಂಧೀಜಿ

# ಲೇಖಕರ ನುಡಿಗಳು

ಭಾರತದ ಬಿಡುಗಡೆಗಾಗಿ ಒಂದು ನೂರು ವರ್ಷಗಳ ಕಾಲ ಭಾರತೀಯರು ಹೋರಾಟ ಮಾಡಿದ್ದಾರೆ. ಗಾಂಧೀಜಿ ರಾಷ್ಟ್ರೀಯ ಕಾಂಗ್ರೆಸ್ಸಿನ ಚುಕ್ಕಾಣಿ ಹಿಡಿದ ಮೇಲೆ, ಈ ಸಂಗ್ರಾಮಕ್ಕೆ ಹೊಸ ತಿರುವುವನ್ನು ನೀಡಿದರು. ಜನಸಾಮಾನ್ಯರನ್ನು ಶಾಂತಿಯುತ ಹೋರಾಟದಲ್ಲಿ ತೊಡಗಿಸಿಕೊಳ್ಳಲು ಪ್ರೇರಣೆ ನೀಡಿದರು. ಬ್ರಿಟಿಷರ ದಬ್ಬಾಳಿಕೆಯಿಂದ ನೊಂದು ಬೆಂದ ಜನಸಾಮಾನ್ಯರನ್ನು ಹೋರಾಟಕ್ಕಿಳಿಸಿ, ಜೊತೆಜೊತೆಗೆ ಅವರ ಸಮಸ್ಯೆಗಳನ್ನು ಬಗೆಹರಿಸಲು ತೊಡಗಿದರಾಗಿ, ಜನಸಾಮಾನ್ಯರು ಗಾಂಧೀಜಿ ತಮ್ಮ ಒಳಿತಿಗಾಗಿ ದುಡಿಯುವರೆಂಬುದನ್ನು ಮನಗಂಡು, ಅವರನ್ನು ತಮ್ಮ ನಾಯಕರನ್ನಾಗಿ ಸ್ವೀಕರಿಸುವ ಮೂಲಕ ಸರ್ಕಾರವನ್ನು, ಬ್ರಿಟಿಷರನ್ನು ಭಾರತದಿಂದ ಓಡಿಸುವವರೆಗೂ ಗಾಂಧೀಜಿ ಅವರಿಗೆ ಬೆಂಬಲವಾಗಿ ನಿಂತರು. ಈ ಹೋರಾಟದಲ್ಲಿ ಲಕ್ಷಾಂತರ ಮಂದಿ ತೊಡಗಿಕೊಂಡರು. ಅವರಲ್ಲಿ ಅನೇಕರು ಗುಂಡಿನೇಟಿಗೆ, ಲಾಠಿ ಏಟಿಗೆ ಅಸು ನೀಗಿದರು. ಬ್ರಿಟಿಷ್ ಸರ್ಕಾರ ಅನೇಕರನ್ನು ಗಲ್ಲಿಗೇರಿಸಿತು. ಸೆರೆಮನೆವಾಸ ಅನುಭವಿಸಿದವರು ಲಕ್ಷಾಂತರ ಮಂದಿ. ಜನರ ಸತತ ಹೋರಾಟದ ಫಲವಾಗಿ ಸ್ವಾತಂತ್ರ್ಯ ಪ್ರಾಪ್ತವಾಯಿತು. ಈ ಸಂಗ್ರಾಮದಲ್ಲಿ ಕರ್ನಾಟಕದ ಪಾತ್ರ ಅದ್ವಿತೀಯವಾದುದು. ರೈತರು, ದಲಿತರು, ಹಿಂದು, ಮುಸ್ಲಿಂರು, ಕ್ರಿಶ್ಚಿಯನ್ನರು, ಪಾರ್ಸಿಗಳು ಎಲ್ಲರೂ ಭಾಗವಹಿಸಿದ್ದರು. ಇಂಗ್ಲೀಷರ ಸೈನ್ಯದಲ್ಲಿದ್ದ ಭಾರತೀಯ ಅಧಿಕಾರಿಗಳು, ಸರ್ಕಾರದ ಉನ್ನತ ಹುದ್ದೆಗಳಲ್ಲಿದ್ದ ವಿದ್ಯಾವಂತ ತರುಣರು, ಶಾಲಾ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿದ್ದ ಯುವಕ ಯುವತಿಯರು ಎಲ್ಲರೂ ಈ ಸಂಗ್ರಾಮದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ತಮ್ಮ

ಪಾಲಿನ ಸೇವೆಯನ್ನು ಭಾರತ ಮಾತೆಗೆ ಅರ್ಪಿಸಿದ್ದಾರೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ನಡೆದ ಜಂಗಲ್ ಕಾಯ್ದೆ ಮುರಿಯುವ ಚಳುವಳಿ, ಕರ ನಿರಾಕರಣ ಚಳುವಳಿ, ಉಪ್ಪಿನ ಸತ್ಯಾಗ್ರಹಗಳು ಸ್ವರ್ಣಾಕ್ಷರಗಳಲ್ಲಿ ಬರೆದಿಡಬೇಕಾದ ಚಳುವಳಿಗಳು.

ತ್ಯಾಗ ಬಲಿದಾನಗಳಿಂದ ಪಡೆದ ಸ್ವಾತಂತ್ರ್ಯ ಇಂದಿನ ರಾಜಕಾರಣಿಗಳು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುತ್ತಿರುವುದು ವಿಷಾದದ ಸಂಗತಿ. ದೇಶಕ್ಕೆ ಸ್ವಾತಂತ್ರ್ಯ ಬಂದು 75 ವರ್ಷಗಳೇ ಆಗಿದ್ದರೂ ಇಂದಿನ ರಾಜಕೀಯ ಪಕ್ಷಗಳು, ಬಡತನ, ಅಸಮಾನತೆ, ಶೋಷಣೆ, ದಬ್ಬಾಳಿಕೆ, ಅಸಹಿಷ್ಣುತೆ, ಕೋಮುದ್ವೇಷ ಇವುಗಳನ್ನು ಹತ್ತಿಕ್ಕುವ ಬದಲು, ಬೆಳೆಯಲು ಅವಕಾಶ ಮಾಡಿಕೊಟ್ಟಿದ್ದಾರೆ. ಇದೊಂದು ದುರಂತವೇ ಆಗಿದೆ.

ಕನ್ನಡಿಗರ ಈ ವೀರಕಥನವನ್ನು ಪ್ರಕಟಿಸಲು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮುಂದೆ ಬಂದಿರುವುದು ಶ್ಲಾಘನೀಯ. ಇದಕ್ಕಾಗಿ ಸಂಸ್ಥೆಯ ಅಧ್ಯಕ್ಷರಾದ ಡಾ. ವೂಡೇ ಪಿ. ಕೃಷ್ಣ ಅವರಿಗೆ, ಕಾರ್ಯದರ್ಶಿಗಳಾದ ಶ್ರೀಮತಿ ಇಂದಿರಾ ಕೃಷ್ಣಪ್ಪನವರಿಗೆ ವಂದನೆಗಳು.

ಎಚ್.ಎಸ್. ದೊರೆಸ್ವಾಮಿ

# ಪರಿವಿಡಿ



ಹೆಣ್ಣು ಗಂಡಿಗಿಂತಲೂ ಉದಾರರಾದವಳು.
ಏಕೆಂದರೆ ಇಂದಿಗೂ ಹೆಣ್ಣು ತ್ಯಾಗದ,
ಮೂಕ ವೇದನೆಯ, ನಮ್ರತೆಯ, ನಂಬಿಕೆಯ
ಹಾಗು ಜ್ಞಾನದ ಒಂದು ಪ್ರತೀಕವಾಗಿದ್ದಾಳೆ.
ಹೆಣ್ಣುಮಕ್ಕಳ ಒಳ ಅರಿವು ಅನೇಕ ಬಾರಿ
ಗಂಡುಮಕ್ಕಳ ಗರ್ವಪೂರಿತ ಜ್ಞಾನಕ್ಕಿಂತಲೂ
ಮಿಗಿಲಾಗಿದುದೆಂದು ಸಿದ್ಧವಾಗಿದೆ.

– ಮಹಾತ್ಮ ಗಾಂಧೀಜಿ

# ಸ್ವಾತಂತ್ರ್ಯ ಸಂಗ್ರಾಮ – ಕರ್ನಾಟಕ

1757ರಲ್ಲಿ ಪ್ಲಾಸೀಯುದ್ಧ ಆದಮೇಲೆ ಭಾರತ ದೇಶ ಇಂಗ್ಲೀಷರ ಸಂಪೂರ್ಣ ಗುಲಾಮಗಿರಿಗೆ ಒಳಗಾಯಿತು. ಆದರೆ ಇಷ್ಟು ಮಾತ್ರದಿಂದ ಇಂಗ್ಲೀಷರು ಭಾರತ ದೇಶದ ಮೇಲೆಲ್ಲ ನಿರುಪಾಧಿತವಾಗಿ ಪ್ರಭುತ್ವ ನಡೆಸಲಾಗಲಿಲ್ಲ. ದೇಶದ ಪ್ರಜೆಗಳು ತೆಪ್ಪಗೆ ಗುಲಾಮಗಿರಿಯನ್ನು ಒಮ್ಮೆಲೇ ಒಪ್ಪಿಕೊಂಡು ಬಿಡಲಿಲ್ಲ. ಬ್ರಿಟಿಷರು ಭಾರತದಲ್ಲಿ ಪ್ರಭುತ್ವ ನಡೆಸಲೂ, ಬೇರೂರಲೂ ಒಪ್ಪದ ಜನತೆಯ ಅಪ್ರಿಯತೆಯ ಗುಪ್ತಗಾಮಿನಿಯ ಪ್ರವಾಹ ಕಾಲಕಾಲಕ್ಕೆ ಬಲಗೊಳ್ಳುತ್ತಾ ಹೋಯಿತು.

ಈ ಹೋರಾಟದಲ್ಲಿ ಕರ್ನಾಟಕದ ಪಾತ್ರ ಕೂಡ ಅಮೋಘವಾದದ್ದು. 1757ರಿಂದ 1947ರವರೆಗೆ ಕನ್ನಡನಾಡಿನಲ್ಲೂ ಬ್ರಿಟಿಷರ ಆಡಳಿತವ ವಿರುದ್ಧ ಸತತ ಹೋರಾಟ ನಡೆಯಿತು. ಈ ಸಂಗ್ರಾಮದ ಸ್ವರೂಪ ನಾನಾ ಘಟ್ಟಗಳಲ್ಲಿ ನಾನಾ ರೀತಿಯಲ್ಲಿ ರೂಪುಗೊಂಡಿತು. ಈ ಎಲ್ಲ ಘಟ್ಟಗಳಲ್ಲೂ ಜನ ತಮ್ಮ ಧೈರ್ಯ ಸ್ಥೈರ್ಯಗಳನ್ನು ಪ್ರದರ್ಶಿಸಿದ್ದಾರೆ; ತ್ಯಾಗ ಬಲಿದಾನಗಳನ್ನು ಮಾಡಿದ್ದಾರೆ. ಕನ್ನಡನಾಡಿನ ಜನ ಅಭಿಮಾನಧನರು. ಅವರ ದೇಶಭಕ್ತಿಯ ಗುಣಮಟ್ಟ ಪರಕೀಯರನ್ನೂ ತಲೆದೂಗುವಂತೆ ಮಾಡಿತು.

ಕನ್ನಡನಾಡಿನ ಸ್ವಾತಂತ್ರ್ಯ ಸಂಗ್ರಾಮ ನಾಲ್ಕು ಘಟ್ಟಗಳಲ್ಲಿ ನಡೆದಿದೆ. ಮೊದಲನೆಯ ಘಟ್ಟ 1760ರಿಂದ 1800ರವರೆಗೆ. ಹೈದರ್, ಆತನ ಮಗ ಟಿಪ್ಪುಸುಲ್ತಾನ್ ಇವರುಗಳು ಪರದೇಶದವರಿಂದ, ಅದರಲ್ಲೂ ಮುಖ್ಯವಾಗಿ ಬ್ರಿಟಿಷರಿಂದ ಭಾರತವನ್ನು ರಕ್ಷಿಸಬೇಕೆಂದೂ, ಅವರನ್ನು ಈ ದೇಶದಿಂದ ಓಡಿಸಬೇಕೆಂದೂ ವೀರಸಂಕಲ್ಪ ಮಾಡಿ ಹೋರಾಡಿದರು. ಈ ಹೋರಾಟ ಮಾಡುತ್ತಲೇ ಅವರು ವೀರ

ಸ್ವರ್ಗವನ್ನೇರಿದರು. 1799ರಲ್ಲಿ ಶ್ರೀರಂಗಪಟ್ಟಣದ ಪತನವಾದ ಮೇಲೆ ಬ್ರಿಟಿಷರು ಭಾರತದಲ್ಲಿ ಭದ್ರವಾಗಿ ತಳ ಊರುವಂತಾಯಿತು.

ಎರಡನೆಯ ಪರ್ವ 1800ರಿಂದ 1857ರವರೆಗೆ, ಈ 57 ವರ್ಷಗಳ ಅವಧಿಯಲ್ಲಿ ಭಾರತಾದ್ಯಂತ 70ಕ್ಕೂ ಹೆಚ್ಚಿನ ಬಂಡಾಯಗಳು, ಪ್ರತಿಭಟನೆಗಳು ಸಂಗ್ರಾಮಗಳು ನಡೆದುಹೋದವು. ಈ ಘಟ್ಟವನ್ನು ಭಾರತದ ಮಹಾ ವಿಪ್ಲವದ ಪೂರ್ವಸಿದ್ಧತಾ ಪರ್ವವೆಂದು ತಿರುಮಲೆ ತಾತಾಚಾರ್ಯ ಶರ್ಮರು ಕರೆದಿದ್ದಾರೆ. 57 ವರ್ಷಗಳ ಹೋರಾಟದ ಈ ದ್ವಿತೀಯ ಘಟ್ಟದಲ್ಲಿ ಭಾರತೀಯ ಜನರು ತೋರಿದ ತ್ಯಾಗ, ಪರಾಕ್ರಮಗಳು 1857ರ ಮಹಾಕ್ರಾಂತಿಗೆ ನಾಂದಿಯಾಯಿತು. ಈ ಅವಧಿಯಲ್ಲಿ ಕರ್ನಾಟಕದಲ್ಲೇ ಬಿದನೂರು, ಕಿತ್ತೂರು, ಸಂಗೊಳ್ಳಿ, ಸಿಂದಗಿ, ದಕ್ಷಿಣ ಕನ್ನಡ, ಕೊಡಗು, ಬಾದಾಮಿ ಮುಂತಾದ ಕಡೆಗಳಲ್ಲೆಲ್ಲ ಪ್ರತಿಭಟನೆಗಳು, ಸಂಗ್ರಾಮಗಳು ನಡೆದವು. ಇವೆಲ್ಲ ಬಂಡಾಯಗಳ ಪರಮೋದ್ದೇಶ ಭಾರತದಲ್ಲಿ ಪರಕೀಯರ ಪ್ರಭುತ್ವ ಸ್ಥಾಪನೆಯಾಗದಂತೆ ಮಾಡುವುದೇ ಆಗಿತ್ತು.

ಮೂರನೆಯ ಘಟ್ಟ 1857–58ರ ಅವಧಿಯದು. ಈ ಸಮಯದಲ್ಲಿ ಮುಂಬಯಿ ಕರ್ನಾಟಕದಲ್ಲೂ, ಹೈದರಾಬಾದ್ ಕರ್ನಾಟಕದಲ್ಲೂ, ಹಲವು ಘಟನೆಗಳು ನಡೆದವು. ನಾನಾರಾಯನು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಸಹಾಯ ಕೋರಿ ಪತ್ರ ಬರೆದಿದ್ದುದಾಗಿಯೂ, 1857ರ ಸುಮಾರಿನಲ್ಲಿ ನಾನಾರಾಯನ ಪ್ರತಿನಿಧಿ ಪ್ರಚಾರಕರನೇಕರು ಮೈಸೂರು ದೇಶದಲ್ಲಿ ಸುತ್ತಾಡಿದರೆಂದೂ, ಆ ಪೈಕಿ ಬ್ರಹ್ಮಗಿರಿಬುವಾ ಎಂಬ ಸಾಧು ಒಬ್ಬನನ್ನು ಬೆಂಗಳೂರಿನಲ್ಲಿ ಬ್ರಿಟಿಷ್ ಕಮಿಷನರ್ ಬಂಧಿಸಿ ಅವನ ಹೇಳಿಕೆ ತೆಗೆದುಕೊಂಡುದಾಗಿಯೂ ಡಿ. ಪಿ. ಕರಮರಕರ್ ತಿಳಿಸುತ್ತಾರೆ. ನಾನಾಸಾಹೇಬ ಸ್ವತಃ ಬೆಂಗಳೂರಿಗೆ ಬಂದಿದ್ದು ಚಿಕ್ಕಪೇಟೆಯ ಕಾಶಿವಿಶ್ವೇಶ್ವರನ ದೇವಸ್ಥಾನದಲ್ಲಿ ತಂಗಿದ್ದನೆಂಬ ವದಂತಿ ಇದೆ.

ಸುರಪುರದ ಚಿಕ್ಕವೆಂಕಟಪ್ಪನಾಯ್ಕ, ನರಗುಂದದ ಬಾಬಾಸಾಹೇಬ, ಮುಂಡರಗಿಯ ಭೀಮರಾಯ ಹಾಗೂ ಹಲಗಲಿಯ ಬೇಡ ಜನಾಂಗದ ಸತ್ವಶಾಲಿ ಪರಾಕ್ರಮ ಪ್ರದರ್ಶನಗಳು 1857ರ ಮಹಾಕ್ರಾಂತಿಯ ಅವಿಭಾಜ್ಯ ಅಂಗ.

ನಾಲ್ಕನೆಯ ಘಟ್ಟ ಮಹಾತ್ಮ ಗಾಂಧಿಯವರು ಭಾರತದ ರಾಜಕೀಯಕ್ಕೆ ಪ್ರವೇಶಮಾಡಿದ ಕಾಲದಿಂದ ಆರಂಭವಾಗುತ್ತದೆ. ಅವರು ದೇಶದ ನಾಯಕತ್ವ ವಹಿಸಿಕೊಂಡ ಮೇಲೆ ಸಂಗ್ರಾಮದ ಸ್ವರೂಪ ಪೂರ್ಣವಾಗಿ ಮಾರ್ಪಟ್ಟಿತು. ಸತ್ಯ, ಅಹಿಂಸೆ, ಅಸಹಕಾರ, ಅಸ್ತ್ರಗಳನ್ನು ಬಳಸಿ, ಸ್ವಾತಂತ್ರ್ಯ ಸಂಗ್ರಾಮಕ್ಕೆ ಜನತಾ ಚಳುವಳಿಯ ಸ್ವರೂಪ ಕೊಟ್ಟು ಅದ್ಭುತ ಪವಾಡವನ್ನೇ ಅವರು ಸಾಧಿಸಿಬಿಟ್ಟರು.

ಸ್ವಾತಂತ್ರ್ಯ ಸಾಧನೆಗಾಗಿ ನಡೆದ ಪ್ರಯತ್ನಗಳು ಅನೇಕ, ಅಸಂಖ್ಯಾತ. ಅನೇಕ ವೀರರೂ, ವೀರರಮಣಿಯರೂ ಈ ಹೋರಾಟದಲ್ಲಿ ಪಾಲ್ಗೊಂಡಿದ್ದಾರೆ.

1858ರಿಂದ 1900ರ ವರೆಗೆ ಕರ್ನಾಟಕ ನಿದ್ರಾವಸ್ಥೆಯಲ್ಲಿದ್ದಂತೆ ತೋರುತ್ತದೆ. 1855ರಲ್ಲಿ ಪ್ರಥಮ ಕಾಂಗ್ರೆಸ್ ಅಧಿವೇಶನವು ಮುಂಬೈನಲ್ಲಿ ಸಮಾವೇಶಗೊಂಡಿತು. ಈ ಸಮಾವೇಶಕ್ಕೆ ಕರ್ನಾಟಕದಿಂದ ಬಳ್ಳಾರಿಯ ಕೋಲಾಚಲಂ ವೆಂಕಟರಾವ್ ಹಾಗೂ ಬೆಳಗಾವಿಯ ಭಾಟೆಯವರು ಪ್ರತಿನಿಧಿಗಳಾಗಿ ಹೋಗಿದ್ದರಾದರೂ ಕರ್ನಾಟಕದಲ್ಲಿ ಮತ್ತೆ ರಾಜಕೀಯ ಹೋರಾಟ ಆರಂಭವಾದದ್ದು 1900ರ ಅನಂತರವೇ.

ಇಂಗ್ಲಿಷ್ ಶಿಕ್ಷಣ ಪಡೆದ ಬುದ್ಧಿಜೀವಿಗಳಲ್ಲಿ ಜನತಂತ್ರದ ಕಲ್ಪನೆ, ಸ್ವಾತಂತ್ರ್ಯ ದಾಹ ಇವು ಉಂಟಾದವು. ರಾಷ್ಟ್ರೀಯತೆಯ ಉದಾತ್ತ ಭಾವನೆಗಳು ಜನರಲ್ಲಿ ಬೆಳೆಯತೊಡಗಿದವು.

ಫ್ಲೀಟ್, ರೈಸ್, ಆಲೂರು ವೆಂಕಟರಾಯರು, ಕರ್ನಾಟಕದ ಚರಿತ್ರೆಯನ್ನು ಬರೆದುದರ ಪರಿಣಾಮವಾಗಿ ಕರ್ನಾಟಕ ಇತಿಹಾಸದ ಪ್ರಾಚೀನ ವೈಭವದ ನೆನಪಾಗಹತ್ತಿತು.

ವೆಂಕಟಾಚಾರ್ಯ, ಗಳಗನಾಥ, ಶಾಂತಕವಿ, ಕೆರೂರು ವಾಸುದೇವಾಚಾರ್ಯ, ಸುಬೋಧ ರಾಮರಾಯರು, ನಾಗೇಶ ಮುಂತಾದವರು ತಮ್ಮ ಬರಹಗಳ ಮುಖಾಂತರ ಕನ್ನಡ ಜನತೆಯಲ್ಲಿ ದೇಶಭಕ್ತಿಯನ್ನು ಉಜ್ವಲಗೊಳಿಸಿದರು.

ಆರ್ಯಸಮಾಜ, ಬ್ರಹ್ಮಸಮಾಜ, ಥಿಯಾಸಫಿಕಲ್ ಸೊಸೈಟಿ, ರಾಮಕೃಷ್ಣ ಮಿಷನ್ ಇವುಗಳ ಶಾಖೆಗಳು ಕರ್ನಾಟಕದಲ್ಲೂ ಹುಟ್ಟಿಕೊಂಡಿದ್ದರ ಪರಿಣಾಮವಾಗಿ ಜನತೆಯಲ್ಲಿ ಹೊಸ ವಿಚಾರಧಾರೆಯೂ, ಸರ್ವಧರ್ಮ ಸಮನ್ವಯ ಭಾವನೆಯೂ ಬೆಳೆದವು.

ಲೋಕಮಾನ್ಯ ತಿಲಕರು ಹಾಗೂ ಅವರು ನಡೆಸುತ್ತಿದ್ದ ಕೇಸರಿ ಪತ್ರಿಕೆ ಕರ್ನಾಟಕದ ಜನತೆಯ ಮೇಲೆ ಬೀರಿದ ಪ್ರಭಾವ ಅಷ್ಟಿಷ್ಟಲ್ಲ. ತಿಲಕರ ಸ್ವಾತಂತ್ರ್ಯದ ಹಂಬಲ, ಅವರ ಧೈರ್ಯ ಉತ್ಸಾಹಗಳು ಕರ್ನಾಟಕ ಜನತೆಯನ್ನು ಬಡಿದೆಬ್ಬಿಸಿದವು.

1903ರಲ್ಲಿ ಧಾರವಾಡದಲ್ಲಿ ನಡೆದ ಮುಂಬಯಿ ರಾಜ್ಯ ರಾಜಕೀಯ ಸಮ್ಮೇಳನ ಒಂದು ಪ್ರಮುಖ ಮೈಲಿಗಲ್ಲು. ಲೋಕಮಾನ್ಯ ತಿಲಕರೂ, ದಾದಾಭಾಯ್ ನವರೋಜಿಯವರೂ ಸಮ್ಮೇಳನಕ್ಕೆ ಬಂದಿದ್ದರು. ಕರ್ನಾಟಕದ ಗುರುನಾಥರಾವ್ ಪಾಠಕ್, ಪಾಂಡುರಂಗರಾವ್ ಅಠವಳೆ, ಗದಿಗಯ್ಯ ಹೊನ್ನಾಪುರುಮಠ, ನಾರಾಯಣರಾವ್ ಕೌಜಲಗಿ ಇವರು ಸಮ್ಮೇಳನದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು.

ವಂಗಭಂಗದಿಂದ ಇಡೀ ಭಾರತದಲ್ಲಿ ಹರಡಿದ ಅಶಾಂತಿ ಕರ್ನಾಟಕವನ್ನೂ ಆವರಿಸಿತು. ಧಾರವಾಡ, ಬೆಳಗಾಂ, ಗದಗ್, ಆಳ್ನಾವರ್, ಬಾಗಲಕೋಟೆಗಳಲ್ಲಿ ಇದರ ಪ್ರತಿಭಟನಾರ್ಥ ಸಾರ್ವಜನಿಕ ಸಭೆಗಳು ನಡೆದವು.

1905–06ರಲ್ಲಿ ಬಾಲಗಂಗಾಧರ ತಿಲಕರು ಕರ್ನಾಟಕದಲ್ಲಿ ಪ್ರಚಾರ ಪ್ರವಾಸ ಕೈಗೊಂಡರು. ಇದರಿಂದ ಬಹಳ ಜನಜಾಗೃತಿಯುಂಟಾಯಿತು.

ಮುಂಬೈ ಕರ್ನಾಟಕ ಕೈಗಾರಿಕಾ ಸಮ್ಮೇಳನದ ಮೊದಲನೆಯ ಅಧಿವೇಶನ ಧಾರವಾಡದಲ್ಲಿ ದಿ.12–5–1907ರಂದು ನಡೆಯಿತು. ಸ್ವದೇಶಿ ಚಳುವಳಿ ಈ ವೇಳೆಗಾಗಲೇ ಆರಂಭವಾಗಿತ್ತು. ಆ ಚಳುವಳಿಯಲ್ಲಿ ಆಸಕ್ತಿ ಹೊಂದಿದ್ದ ಎಲ್ಲರೂ ಈ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಈ ಸಮ್ಮೇಳನವಾದ ಮೇಲೆ ಬೆಳಗಾಮಿನ ಗಂಗಾಧರರಾವ್ ದೇಶಪಾಂಡೆಯವರು, ಬಿಜಾಪುರದ ಶ್ರೀನಿವಾಸರಾವ್ ಕೌಜಲಗಿಯವರು, ಆಲೂರು ವೆಂಕಟರಾಯರು, ಗಡಿಗಯ್ಯ ಹೊನ್ನಾಪುರ ಮಠ ಅವರು, ಸ್ವದೇಶೀ ಚಳುವಳಿಯನ್ನು ಆರಂಭಿಸಿ, ಬಿರುಸಿನ ಪ್ರಚಾರ ಕೈಗೊಂಡರು. ಬೆಳಗಾಂವಿಯಲ್ಲಿ ದಿ.9–6–1908ರಲ್ಲಿ ಮೊದಲ ಬಾರಿಗೆ ಹೆಂಡದಂಗಡಿಯ ಪಿಕೆಟಿಂಗ್ ನಡೆದು, ಪಾಚ್ಛಾಪುರದ ಡಾ॥ ಜೋಶಿ, ಬೆಳಗಾಂವಿಯ ಗೋವಿಂದರಾವ್‌ಯಾಳಗಿ ಇವರ ದಸ್ತಗಿರಿಯಾಗಿ ಅವರಿಗೆ ಹದಿನೈದು ದಿನಗಳ ಕಾರಾಗೃಹಶಿಕ್ಷೆ ವಿಧಿಸಲಾಯಿತು. ಗಂಗಾಧರರಾವ್ ದೇಶಪಾಂಡೆಯವರು ಬೆಳಗಾಂವಿಯಲ್ಲಿ ರಾಷ್ಟ್ರೀಯ ಶಾಲೆಯೊಂದನ್ನು ತೆರೆದರು. ಇಂಥದೇ ಶಾಲೆಗಳನ್ನು ಕರ್ನಾಟಕದಾದ್ಯಂತ ತೆರೆಯುವ ಪ್ರಯತ್ನ ನಡೆಯಿತು. ಕಾಕಾಕಾಳೇಲ್ಕರ್, ಆಲೂರು ವೆಂಕಟರಾವ್, ನರಗುಂದದ ಜಯರಾವ್ ಇವರು ರಾಷ್ಟ್ರೀಯ ಶಾಲೆಗಳ ಸಂಸ್ಥಾಪನೆಯಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಈ ಅವಧಿಯಲ್ಲಿ ಇಡೀ ಕರ್ನಾಟಕದಲ್ಲಿ 50 ರಾಷ್ಟ್ರೀಯ ಶಾಲೆಗಳನ್ನು ತೆರೆಯಲಾಯಿತು.

ಮುಂದೆ ಪರದೇಶಿ ವಸ್ತ್ರದಹನ ಕಾರ್ಯಕ್ರಮ ಸಂಘಟಿತವಾಯಿತು. ರಾಣೇಬೆನ್ನೂರಿನಲ್ಲಿನ ಸಭೆಯಲ್ಲಿ ಪರದೇಶೀ ವಸ್ತ್ರದಹನದ ಕಾರ್ಯಕ್ರಮ ಎಂದೂ ಕೇಳರಿಯದ ಪ್ರಮಾಣದಲ್ಲಿ ನಡೆಯಿತು. ಆಲೂರು ವೆಂಕಟರಾಯರು, ಗದಿಗಯ್ಯ ಹೊನ್ನಾಪುರಮಠ,

ಮುದವೀಡು ಕೃಷ್ಣರಾಯರು, ಸಕ್ಕರೆ ಬಾಳಾಚಾರ್ಯರು (ಶಾಂತಕವಿ), ಅನಂತರಾವ್ ದಾಬಡೆ ಇವರು ರಾಷ್ಟ್ರೀಯತೆಯ ಮೂಲತತ್ವಗಳನ್ನು ಕುರಿತು ಜನತೆಯಲ್ಲಿ ವ್ಯಾಪಕ ರೀತಿಯ ಪ್ರಚಾರ ನಡೆಸಿದರು. ಧಾರವಾಡ, ಬೆಳಗಾಂ ಜಿಲ್ಲೆಗಳಲ್ಲಿ ಸ್ವದೇಶಿ ಚಳುವಳಿ ವ್ಯಾಪಕವಾಗಿ ಬೆಳೆಯಿತು. ಬೆಳಗಾಂನ ಬಟ್ಟೆ ವ್ಯಾಪಾರಿಗಳು ಪರದೇಶೀ ವಸ್ತ್ರ ಆಮದು ಮಾಡಿಕೊಳ್ಳುವುದನ್ನು ಬಂದ್ ಮಾಡಿದರು. ಧಾರವಾಡದ ಕಿರಾಣಿ ಅಂಗಡಿ ಮಾಲೀಕರು ದಬಿಟಿ ಮತ್ತು ಜಾನ್‌ಸನ್ ಸಕ್ಕರೆ ಮಾರಾಟವನ್ನು ನಿಲ್ಲಿಸಿದರು. ಧಾರವಾಡದ ಹೊಟೆಲ್ ಮಾಲೀಕರು ಚಹಾ ತಯಾರಿಸುವುದನ್ನು ಕೈಬಿಟ್ಟರು. ಕರಜಗಿಯ ಜನ ಕುಡಿತವನ್ನು ನಿಷೇಧಿಸುವುದಾಗಿ ಪ್ರತಿಜ್ಞಾವಚನ ತೊಟ್ಟರು. ಬಾಗಲುಕೋಟೆಯಲ್ಲಿ ಸ್ವದೇಶೀ ಅಂಗಡಿಗಳು ಆರಂಭವಾದವು. ಬೆಳಗಾಂ, ಧಾರವಾಡ, ಹುಬ್ಬಳ್ಳಿ, ಬಾಗಲುಕೋಟೆಗಳಲ್ಲಿ ಸ್ವರಾಜ್ಯ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಹೀಗೆ 1905ರಿಂದ 1910ರವರೆಗೆ ನಡೆದ ಸ್ವದೇಶೀ ಚಳುವಳಿಯಲ್ಲಿ ಮಹಾರಾಷ್ಟ್ರಕ್ಕೆ ಹೊಂದಿಕೊಂಡಿದ್ದ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ ಜನತಾ ಆಂದೋಳನ ಬಹು ಬಿರುಸಿನಿಂದ ನಡೆದವು. ಇದಕ್ಕೆ ಕಾರಣ ತಿಲಕರ ಪ್ರಭಾವ ಎಂಬುದನ್ನು ಒತ್ತಿ ಹೇಳಬೇಕಾಗಿಲ್ಲ. 1906ರಲ್ಲಿ ತಿಲಕರ ದಸ್ತಗಿರಿಯಾಗಿ ಅವರಿಗೆ 6 ವರ್ಷಗಳ ಕರಿನೀರು ಶಿಕ್ಷೆ ವಿಧಿಸಿ ಅವರನ್ನು ಮಾಂಡಲೆ ಜೈಲಿಗೆ ಕರೆದೊಯ್ಯಲಾಯಿತು. ಇದು ಇಡೀ ದೇಶವನ್ನು ಅಲ್ಲೋಲಕಲ್ಲೋಲಗೊಳಿಸಿತು. ಆಗ ಮುಂಬೈ ಕರ್ನಾಟಕದವರ ಒಲವು ಸ್ಪಷ್ಟವಾಗಿ ತಿಲಕರ ಉಗ್ರಗಾಮಿ ಪಕ್ಷದ ಕಡೆಗೇ ಇತ್ತು.

ಬೆಳಗಾಂವಿಯಲ್ಲಿ 1916ರಲ್ಲಿ ಮುಂಬಯಿ ಪ್ರಾಂತೀಯ ರಾಜಕೀಯ ಸಮ್ಮೇಳನ ಸಮಾವೇಶಗೊಂಡಿತು. ಈ ಸಮ್ಮೇಳನಕ್ಕೆ ಗಾಂಧೀಜಿ, ತಿಲಕ್, ದಾದಾಸಾಹೇಬ್ ಕರಂಡಿಕರ್ ಮುಂತಾದ ನಾಯಕರು ಆಗಮಿಸಿದ್ದರು. ಗಂಗಾಧರರಾವ್ ದೇಶಪಾಂಡೆ ಅವರ ಅಧ್ಯಕ್ಷತೆಯಲ್ಲಿ ಹೋಂರೂಲ್ ಲೀಗಿನ ಕರ್ನಾಟಕ ಶಾಖೆಯನ್ನು ಧಾರವಾಡದಲ್ಲಿ ಸ್ಥಾಪಿಸಲಾಯಿತು.

18ನೇ ಪ್ರಾಂತೀಯ ಸಮ್ಮೇಳನ ಬಿಜಾಪುರದಲ್ಲಿ 1918ರ ಮೇ ಒಂದನೇ ತಾರೀಖು ವಿಠ್ಠಲ್‌ಭಾಯ್ ಪಟೇಲರ ಅಧ್ಯಕ್ಷತೆಯಲ್ಲಿ ಸಮಾವೇಶಗೊಂಡಿತು. ಗಾಂಧೀಜಿ ಮತ್ತು ಸರೋಜಿನಿನಾಯ್ಡು ಅವರು ಈ ಸಮ್ಮೇಳನಕ್ಕೆ ಆಗಮಿಸಿದ್ದರು. ಈ ಸಮ್ಮೇಳನದಲ್ಲಿ ಭಾರತೀಯ ಸೈನಿಕರ ತರಬೇತಿಗಾಗಿ ಒಂದು ಪ್ರತ್ಯೇಕ ಸೈನಿಕ ಕಾಲೇಜನ್ನು ತೆರೆಯಬೇಕೆಂದೂ, ವರ್ಣಭೇದವಿಲ್ಲದೆ ಭಾರತೀಯರಿಗೂ ಉನ್ನತ ಅಧಿಕಾರ ಸ್ಥಾನಗಳಿಗೇರುವ ಅವಕಾಶವಿರಬೇಕೆಂದೂ ನಿರ್ಣಯಗಳಾದವು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಮ್ಮೆಂಬಳ ಪೈ, ಸುಬ್ರಾಯಬಾಳಿಗ, ಪಿ. ಕೆ. ರಾವ್, ಪಂಜೆ ಮಂಗೇಶರಾಯರು ಸ್ವಾತಂತ್ರ್ಯ ಜ್ಯೋತಿಯನ್ನು ಬೆಳಗಿಸಿದ ಮಹನೀಯರು. ಬಳ್ಳಾರಿಯಲ್ಲಿ ಕೋಲಾಚಲಂ ಅವರು, ಮೈಸೂರು ಸಂಸ್ಥಾನದಲ್ಲಿ ಎಂ. ವೆಂಕಟಕೃಷ್ಣಯ್ಯ ಅವರು ಮೊದಲು ಜನಜಾಗೃತಿ ಉಂಟು ಮಾಡಿದ ಮಹನೀಯರು.

1918ರವರೆಗೆ ಶಾಸನಬದ್ಧ ಚಟುವಟಿಕೆಗಳಲ್ಲಿ ತೊಡಗಿದ್ದ ಕಾಂಗ್ರೆಸ್, ಗಾಂಧೀಜಿ ಅವರ ನೇತೃತ್ವದಲ್ಲಿ ಅಸಹಕಾರ ಚಳುವಳಿಯ ಮಾರ್ಗ ಹಿಡಿಯಿತು. ತಿಲಕರ ಪ್ರಭಾವ ಕರ್ನಾಟಕದ ಮೇಲೆ ಕಡಿಮೆಯಾಗುತ್ತಾ ಹೋದಂತೆ ಗಾಂಧೀಜಿ ಅವರ ಪ್ರಭಾವಕ್ಕೆ ಜನ ಮಣಿಯಲು ಆರಂಭಿಸಿದರು. ಕೊನೆಕೊನೆಗೆ ಕರ್ನಾಟಕವನ್ನು ಗಾಂಧಿ ಪ್ರಾಂತ್ಯ ಎಂದು ಕರೆಯುವಷ್ಟರ ಮಟ್ಟಿನ ಬದಲಾವಣೆಯಾಗಿ 1920ರಿಂದ ಗಾಂಧಿಯುಗ ಕರ್ನಾಟಕದಲ್ಲಿ ಆರಂಭವಾಯಿತು.

ಮೈಸೂರು ಜಿಲ್ಲೆಯ ತಗಡೂರಿಗೆ ಸಮೀಪದ ಕಿರುಗುಂದ ಕ್ರೈಸ್ತಪಾದ್ರಿಗಳ ಕೇಂದ್ರವಾಗಿತ್ತು. ಅಲ್ಲಿಯ ಪಾದ್ರಿಗಳು ಹರಿಜನರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳಲು ಅವರ ಕಡುಬಡತನವನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದರು. ಹರಿಜನರಲ್ಲಿ ಒಡಕು ಹುಟ್ಟಿಸಿ, ಹಣದ ಆಸೆ ತೋರಿಸಿ ಹಲವಾರು ಬಡಜನರನ್ನು ಕ್ರೈಸ್ತ ಮತಕ್ಕೆ ಸೇರಿಸಿಕೊಂಡರು. ಆಳರಸರ ಬೆಂಬಲವಿದೆಯೆಂಬ ಹಮ್ಮಿನಿಂದ

ಪರಕೀಯ ಧರ್ಮಾವಲಂಬಿಗಳು ಹಿಂದೂ ಧರ್ಮದ ಮೇಲೆ ದುರಾಕ್ರಮಣ ಮಾಡುವುದನ್ನು ತಡೆಗಟ್ಟುವ ಉದ್ದೇಶದಿಂದ ಪ್ರಚಾರ ಕಾರ್ಯವನ್ನು ತಗಡೂರಿನ ಸುತ್ತಮುತ್ತಲೂ ತಗಡೂರು ರಾಮಚಂದ್ರರಾಯರು ಕೈಗೊಂಡರು. ಅವರ ಪ್ರಚಾರ ಕಾರ್ಯಕ್ಕೆ ಅಲ್ಲಿಯ ನಾಲ್ಕಾರು ಮಂದಿಯ ಸಹಕಾರ ಸಿಕ್ಕಿದ್ದರಿಂದ 1919ನೇ ಏಪ್ರಿಲ್ ಒಂದನೇ ತಾರೀಖು ಸ್ವರಾಜ್ಯಮಂದಿರವನ್ನು ತಗಡೂರಿನಲ್ಲಿ ಅವರು ಸ್ಥಾಪಿಸಿದರು. ಶ್ರೀ ಮುದುವೀಡು ಕೃಷ್ಣರಾಯರ ಪ್ರಭಾವ ತಗಡೂರರ ಮೇಲೆ ಬಿದ್ದುದರ ಪರಿಣಾಮವಾಗಿ ಅವರು ಹಳ್ಳಿಯ ಹಳೆಯ ರಾಟೆಗಳನ್ನು ತೆಗೆಸಿ, ಅವುಗಳನ್ನು ಹೂವಿನಿಂದ ಸಿಂಗರಿಸಿ, ಒಂದು ಮೆರವಣಿಗೆಯನ್ನು ತಗಡೂರಿನಲ್ಲಿ ನಡೆಸಿದರು. ಅಂದಿನಿಂದ ನೂರಾರು ಜನ ತಗಡೂರಿನ ಸುತ್ತಮುತ್ತ ನೂಲುವವರಾದರು. ತಗಡೂರರು ಶ್ರೀ ಎಸ್. ನಾರಾಯಣರಾಯರನ್ನು ಕೂಡಿಕೊಂಡು, ಖಾದಿ ಮಾರಾಟ, ಗಾಂಧೀ ನೋಟಿನ ಮಾರಾಟ ಆರಂಭಿಸಿದರು. ಇದರಿಂದ 100 ರೂ. ಕೂಡಿತು. ಹರಿಜನರು ನೇಯ್ದ ಬಟ್ಟೆಗಳನ್ನು ಆಗ ಸವರ್ಣರು ಹಾಕಿಕೊಳ್ಳುತ್ತಿರಲಿಲ್ಲ. ಖಾದಿ ಬಟ್ಟೆಯನ್ನು ಹರಿಜನರ ಕೈಲಿ ಮಾಡಿಸಿ, ಮಾರಾಟಮಾಡಲು ತೊಡಗಿದ್ದರಿಂದ ಸವರ್ಣರು ತಗಡೂರರಿಗೆ ಬಹಿಷ್ಕಾರ ಹಾಕಿದರು.

ಮೈಸೂರಿನ ಮಾಜಿ ದಿವಾನರಾದ ವಿ. ಪಿ. ಮಾಧವರಾಯರ ಅಧ್ಯಕ್ಷತೆಯಲ್ಲಿ 1920ರಲ್ಲಿ ಧಾರವಾಡದಲ್ಲಿ ಅಖಿಲ ಕರ್ನಾಟಕ ರಾಜಕೀಯ ಪರಿಷತ್ತು ಕೂಡಿತ್ತು. ಆ ವರ್ಷ ನಾಗಪುರದಲ್ಲಿ ನಡೆಯಲಿದ್ದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನಕ್ಕೆ ಅಧಿಕ ಸಂಖ್ಯೆಯಲ್ಲಿ ಪ್ರತಿನಿಧಿಗಳನ್ನು ಕಳಿಸತಕ್ಕದ್ದೆಂದು ಇಲ್ಲಿ ನಿರ್ಣಯಿಸಲಾಯಿತು.

1920ರಲ್ಲಿ ನಾಗಪುರದಲ್ಲಿ ಸೇಲಂನ ವಿಜಯರಾಘವಾಚಾರ್ಯರ ಅಧ್ಯಕ್ಷತೆಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ಸಿನ ಮಹಾಧಿವೇಶನದಲ್ಲಿ ಕಾಂಗ್ರೆಸ್ ಪ್ರದೇಶಗಳನ್ನು ಭಾಷಾವಾರು ಆಧಾರದ ಮೇಲೆ ಪುನರ್‌ರಚಿಸಬೇಕೆಂಬ ನಿರ್ಣಯವನ್ನು ಕರ್ನಾಟಕದ ಪ್ರತಿನಿಧಿಗಳು

ಮಂಡಿಸಿದರು. ಈ ನಿರ್ಣಯ ಅಂಗೀಕೃತವಾಗಿ ಕಾಂಗ್ರೆಸ್ ಚಟುವಟಿಕೆಗಳನ್ನು ಚುರುಕುಗೊಳಿಸುವ ದೃಷ್ಟಿಯಿಂದ ಭಾರತ ದೇಶವನ್ನು ಭಾಷೆಯ ಆಧಾರದ ಮೇಲೆ 21 ಪ್ರದೇಶಗಳಾಗಿ ವಿಂಗಡಿಸಲಾಯಿತು. ಕರ್ನಾಟಕದ ಪ್ರಾಂತೀಯ ಕಾಂಗ್ರೆಸ್ಸಿಗೆ ಬೆಳಗಾವಿಯ ಗಂಗಾಧರರಾವ್ ದೇಶಪಾಂಡೆಯವರು ಪ್ರಥಮ ಅಧ್ಯಕ್ಷರಾಗಿ ಆಯ್ಕೆಗೊಂಡರು. ಈ ಅಧಿವೇಶನದಲ್ಲಿ ದೇಶೀಯ ಸಂಸ್ಥಾನಗಳಲ್ಲೂ ರಾಷ್ಟ್ರೀಯ ಕಾಂಗ್ರೆಸ್ ಸಮಿತಿಯ ಶಾಖೆಗಳನ್ನು ರಚಿಸಿಕೊಳ್ಳಲು ಅನುಮತಿ ನೀಡಲಾಯಿತು.

ಗಾಂಧೀಜಿ 1920 ರಲ್ಲಿ ಕರ್ನಾಟಕದಲ್ಲಿ ಪ್ರವಾಸ ಕೈಗೊಂಡಿದ್ದರ ಪರಿಣಾಮವಾಗಿ ಜನರ ನರನಾಡಿಗಳಲ್ಲಿ ವಿದ್ಯುತ್ ಸಂಚಾರ-ವಾದಂತಾಯಿತು. ಜನರ ಸ್ವಾತಂತ್ರ್ಯದಾಹ ಇಮ್ಮಡಿಸಿತು. ಈ ಪ್ರವಾಸದಲ್ಲಿ ಗಾಂಧೀಜಿ ಮಂಗಳೂರು, ಬೆಂಗಳೂರು, ಬೆಳಗಾವಿ, ನಿಪ್ಪಾಣಿಗಳಿಗೆ ಭೇಟಿ ಇತ್ತರು. 1921ರಲ್ಲಿ ಲೋಕಮಾನ್ಯ ತಿಲಕರ ಶಿಷ್ಯವರ್ಗಕ್ಕೆ ಸೇರಿದ್ದ ಮೈಸೂರು ಹೈಕೋರ್ಟಿನ ನ್ಯಾಯಾಧೀಶರಾಗಿದ್ದ ಎಸ್. ಎಸ್. ಸೆಟ್ಲೂರ್ ಅವರು ತಮ್ಮ ಹುದ್ದೆಗೆ ರಾಜೀನಾಮೆ ಇತ್ತರು. ಅವರ ಅಧ್ಯಕ್ಷತೆಯಲ್ಲಿ ಪ್ರಥಮಬಾರಿಗೆ ಬೆಂಗಳೂರಿನಲ್ಲಿ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ ಶಾಖೆ ಪ್ರಾರಂಭವಾಯಿತು. ಎಸ್.ಎನ್.ಎಸ್. ರಜ್ವಿ ಅದರ ಪ್ರಥಮ ಕಾರ್ಯದರ್ಶಿಗಳಾದರು. ತುಮಕೂರಿನ ಶಾಖೆಗೆ ಕೆ. ರಂಗಯ್ಯಂಗಾರ್ಯರೂ, ಮೈಸೂರು ಶಾಖೆಗೆ ಎಂ. ವೆಂಕಟಕೃಷ್ಣಯ್ಯ ಅವರು ಅಧ್ಯಕ್ಷರಾದರು. ಮುದುವೀಡು ಕೃಷ್ಣರಾಯರು, ಕಡಪಾ ರಾಘವೇಂದ್ರರಾಯರು, ಕಲ್ಲೂರು ಸುಬ್ಬರಾಯರು, ಶ್ರೀನಿವಾಸರಾವ್ ಮಂಗಳವೇಢೆಯವರು, ಆಲೂರು ವೆಂಕಟರಾಯರು, ಮೈಸೂರು ಸಂಸ್ಥಾನದಲ್ಲಿ ಪ್ರವಾಸ ಕೈಗೊಂಡು ಯುವಕರಲ್ಲಿ ರಾಷ್ಟ್ರೀಯ ಭಾವನೆ ಉದ್ದೀಪನಗೊಳಿಸಿದರು.

1921ರಲ್ಲಿ ಗಾಂಧೀಜಿ ಅಸಹಕಾರ ಚಳುವಳಿಯನ್ನು ಆರಂಭಿಸಿದರು. ಒಂದು ವರ್ಷದೊಳಗೆ ಸ್ವರಾಜ್ಯ ಸಂಪಾದನೆ ಮಾಡುವ ಘೋಷಣೆ ಮಾಡಿದರು. ಗಾಂಧೀಜಿಯ ಅಸಹಕಾರ

ಚಳುವಳಿಯ ಕರೆಗೆ ಕರ್ನಾಟಕ ಅಮೋಘ ರೀತಿಯಲ್ಲಿ ತನ್ನ ಸಹಕಾರವನ್ನಿತ್ತಿತು. ಶಾಲಾ ಕಾಲೇಜುಗಳನ್ನು ಬಹಿಷ್ಕರಿಸಿ ಅನೇಕರು ಹೊರಬಂದರು. ಹುಬ್ಬಳ್ಳಿ, ಹಾನಗಲ್, ಬಾಗಲಕೋಟೆ, ಬಿಜಾಪುರ, ಗದಗ್, ಬೆಳಗಾಂ, ಹೊಸಪೇಟೆ, ಕುಮುಟಾ, ನಿಪ್ಪಾಣಿ, ಸಿರಸಿ, ಸಿದ್ದಾಪುರ, ಬೆಂಗಳೂರುಗಳಲ್ಲಿ ರಾಷ್ಟ್ರೀಯ ಶಿಕ್ಷಣ ಶಾಲೆಗಳನ್ನು ಆರಂಭಿಸಲಾಯಿತು. ಉತ್ತರ ಕನ್ನಡ ಜಿಲ್ಲೆಯ ನಿಷ್ಠಾವಂತ ಗಾಂಧಿವಾದಿ ತಿಮ್ಮಪ್ಪನಾಯಕರು, ಬಿಜಾಪುರದ ಕಾಕಾಕಾರ್ಕಾನಿಸ್ ತಮ್ಮ ಹುದ್ದೆಗಳಿಗೆ ರಾಜೀನಾಮೆ ಇತ್ತು ಕಾಂಗ್ರೆಸ್ಸಿನ ಕಣಕ್ಕೆ ಇಳಿದರು. ಇವರು ಕೊಂಚಕಾಲ ಸಬರಮತಿ ಆಶ್ರಮದಲ್ಲಿ ಗಾಂಧೀಜಿ ಅವರ ನಿಕಟವರ್ತಿಗಳಾಗಿದ್ದು ಆಶ್ರಮ ಜೀವನವನ್ನು ಮೈಗೂಡಿಸಿಕೊಂಡರು.

ಆರ್. ಆರ್. ದಿವಾಕರ್, ವೀರಪ್ಪವಾಲಿ, ನೀಲಕಂಠಪ್ಪ, ಸುಗಂಧಿ, ಚನ್ನಮಲ್ಲಪ್ಪ ಕುರ್ಲೆ, ಡಾ॥ ನಾ. ಸು. ಹರ್ಡೀಕರ್, ಹನುಮಂತರಾವ್ ಕೌಜಲಗಿ, ಹನುಮಂತರಾವ್ ಮೊಹರೆ, ಪರಮಣ್ಣ ಹೊಸಮನಿ ಇವರು ಸರ್ವಸಮರ್ಪಣ ಭಾವನೆಯಿಂದ ದೇಶದ ಕೆಲಸಕ್ಕೆ ತೊಡಗಿ, ಪೂರ್ಣಕಾಲದ ಕಾರ್ಯಕರ್ತರೆನಿಸಿದರು. ಇವರೆಲ್ಲ ಬುದ್ಧಿಜೀವಿಗಳಿದ್ದು, ಕರ್ನಾಟಕದಲ್ಲಿ ಚಳುವಳಿಗಳು ಆಗಿನ್ನೂ ಜನಸಾಮಾನ್ಯರನ್ನು ಆಕರ್ಷಿಸಿರಲಿಲ್ಲ.

ಕರ್ಮವೀರ, ನವಶಕ್ತಿ, ಕರ್ನಾಟಕವೃತ್ತ, ಕರ್ನಾಟಕ ವೈಭವ, ರಾಷ್ಟ್ರಬಂಧು, ರಾಜಹಂಸ, ಕನ್ನಡಿಗ, ವಿಶ್ವಕರ್ನಾಟಕ, ಶರಣ ಸಂದೇಶ ವೃತ್ತಪತ್ರಿಕೆಗಳು ಚಳುವಳಿ ಬೆಳೆಸಲು ತುಂಬ ಸಹಾಯಕವಾದವು.

ಅಸಹಕಾರ ಚಳುವಳಿ ಆರಂಭವಾದೊಡನೆ, ಗಂಗಾಧರರಾವ್ ದೇಶಪಾಂಡೆಯವರನ್ನು ಅವರ ಭಾಷಣಗಳಿಗಾಗಿ ಬಂಧಿಸಿ ಆರು ತಿಂಗಳ ಕಾಲ ಕಾರಾಗೃಹಕ್ಕೆ ತಳ್ಳಲಾಯಿತು. ದಿವಾಕರ್, ಮೊಹರೆ ಹನುಮಂತರಾವ್, ಹನುಮಂತರಾವ್ ಕೌಜಲಗಿ, ಡಿ. ಆರ್. ಮಜಲಿ ಇವರುಗಳ ಬಂಧನವಾಗಿ ಇವರಿಗೆ ತಲಾ ಒಂದು ವರ್ಷದ ಕಠಿಣ ಶಿಕ್ಷೆ ಆಯಿತು.

ಉತ್ತರ ಕನ್ನಡ ಜಿಲ್ಲೆಯಲ್ಲಿ ಆದ ಮೊದಲ ದಸ್ತಗಿರಿ ಬೇಡಕಣಿಯ ಚೌಡನಾಯ್ಕರದು. ಅನಂತರ ತಿಮ್ಮಪ್ಪನಾಯಕರು ಬಂಧಿತರಾದರು. ಬಳ್ಳಾರಿಯಲ್ಲಿ ಪ್ರತಿಬಂಧಕಾಜ್ಞೆಗಳನ್ನು ಮುರಿದು ಟೇಕೂರು ನಾರಾಯಣಶಾಸ್ತ್ರಿ, ಕಲ್ಲೂರು ಸುಬ್ಬರಾವ್, ತ್ಯಾಂಗ್ಲಿ ಭೀಮಸೇನರಾವ್ ಮುಂತಾದವರು ಸೆರೆಮನೆ ಕಂಡರು.

ಸ್ವಾತಂತ್ರ್ಯದ ಬೇಡಿಕೆ ಕರ್ನಾಟಕದಲ್ಲಿ ಬಲಗೊಂಡಿತು. ಅಸಹಕಾರ ಚಳುವಳಿಯ ಅಂಗವಾಗಿ ಕೋರ್ಟುಗಳನ್ನು ಬಹಿಷ್ಕರಿಸಬೇಕೆಂದು ಗಾಂಧಿಯವರು ಕೊಟ್ಟ ಕರೆಗನುಗುಣವಾಗಿ ಬೆಳಗಾವಿಯ ದತ್ತೋಪಂತ ಮಜಲಿ, ಕೃಷ್ಣರಾವ್ ಕರಿಗುಪ್ಪಿ, ನಾರಾಯಣರಾವ್ ಜೋಷಿ ಮತ್ತು ಅಜರೇಕರ್, ಬಿಜಾಪುರದ ಶ್ರೀನಿವಾಸರಾವ್ ಕೌಜಲಗಿ, ಜಯರಾವ್ ದೇಶಪಾಂಡೆ, ಹನುಮಂತರಾವ್ ಕೌಜಲಗಿ, ಗದಗಿನ ಅನಂತರಾವ್ ಜಾಲೀಹಾಳ್, ವೆಂಕಟೇಶ ಕುಲಕರ್ಣಿ, ಮಂಗಳೂರಿನ ಕಾರ್ನಾಡ್ ಸದಾಶಿವರಾವ್, ಕೆ. ಆರ್. ಕಾರಂತ್, ಹೊನ್ನಾವರದ ಎಸ್. ಎಸ್. ಶಾಸ್ತ್ರೀ, ಸಿರಸಿಯ ವಾಸುದೇವರಾವ್ ಕೊಲ್ಲಾಳ್, ಧಾರವಾಡದ ಮಧ್ವರಾವ್ ಕಬ್ಬೂರ್, ವೆಂಕಟರಾವ್ ಮುದುವೀಡಕರ್ ಇವರೆಲ್ಲ ವಕೀಲಿ ತ್ಯಜಿಸಿದ ಮುಖಂಡರು.

1920–22ರ ಅವಧಿಯಲ್ಲಿ ಕರ್ನಾಟಕದಲ್ಲಿ ಅನೇಕ ಸಭೆಗಳು, ಮೆರವಣಿಗೆಗಳು ವಿದೇಶಿ ವಸ್ತ್ರದಹನ ಕಾರ್ಯಕ್ರಮಗಳು ನಡೆದವು. 200ಕ್ಕೂ ಹೆಚ್ಚು ಮಂದಿ ಬಂಧನಕ್ಕೊಳಗಾದರು. ಸರ್ಕಾರದ ದಬ್ಬಾಳಿಕೆಯೂ ಆಗ ಬಲವಾಗಿತ್ತು. 1921ರ ಜೂನ್ 30ರ ಸಂಜೆ ಧಾರವಾಡದಲ್ಲಿ ಹೆಂಡದಂಗಡಿಗಳ ಪಿಕೆಟಿಂಗ್ ನಡೆದ ಸಂದರ್ಭದಲ್ಲಿ ಪ್ರಥಮ ಗೋಳಿಬಾರ್ ಆಯಿತು. ಇದರ ಫಲವಾಗಿ ಮೂವರು ಸತ್ತರು. ಈ ಚಳುವಳಿಗಳ ಮುಖಂಡರಾಗಿದ್ದ ಆರ್. ಆರ್. ದಿವಾಕರ್, ವಾಮನರಾವ್ ಜತಾರ ಮತ್ತು ಭಿಸೆ ಅವರನ್ನೂ ಒಳಗೊಂಡಂತೆ 29 ಮಂದಿಯ ದಸ್ತಗಿರಿಯಾಯಿತು. ತನಿಖೆ ನಡೆದು ಕಬ್ಬೂರ್, ಆಲೂರು ವೆಂಕಟರಾವ್, ಹರ್ಲೇಕರ್, ಅಬ್ದುಲ್‌ಸಾಹೇಬ್ ಖಲ್ವಿ,

ಅಬ್ದುರ್‌ರಹ್ಮಾನ್ ಮುಂತಾದವರಿಗೆ ತಲಾ 3 ವರ್ಷ ಕಠಿಣ ಸಜ ವಿಧಿಸಲಾಯಿತು. ದಿವಾಕರರು ವಿಚಾರಣೆಯಲ್ಲಿ ಭಾಗವಹಿಸಲು ನಿರಾಕರಿಸಿ, ಒಂದು ಹೇಳಿಕೆಯನ್ನು ಕೋರ್ಟಿನ ಮುಂದೆ ಇಟ್ಟರು. ಈ ಹೇಳಿಕೆಯ ಮುದ್ರಣವಾದ 5000 ಪ್ರತಿಗಳು ಖಟ್ಲೆ ನಡೆದ ಕೆಲವೇ ನಿಮಿಷಗಳಲ್ಲಿ ಮಾರಾಟವಾಗಿಹೋಯಿತು.

1919ರ ಏಪ್ರಿಲ್‌ನಲ್ಲಿ ನಡೆದುಹೋದ ಜಲಿಯನ್ ವಾಲಾಬಾಗ್ ಕಗ್ಗೊಲೆಯ ನೆನಪಿಗಾಗಿ ಕಾಂಗ್ರೆಸ್ಸು ಪ್ರತಿ ವರ್ಷ ಏಪ್ರಿಲ್ 8ರಿಂದ 13ರವರೆಗೆ ರಾಷ್ಟ್ರಾದ್ಯಂತ ರಾಷ್ಟ್ರೀಯ ಸಪ್ತಾಹವನ್ನು ಆಚರಿಸುತ್ತ ಬಂದಿತ್ತು. 13, 1923ರ ಏಪ್ರಿಲ್ ನಾಗಪುರದ ಕಾಂಗ್ರೆಸ್ ಸ್ವಯಂಸೇವಕರು ಕೈಲಿ ರಾಷ್ಟ್ರಧ್ವಜವನ್ನು ಹಿಡಿದು, ಯುರೋಪಿಯನ್ನರೂ, ಉನ್ನತಾಧಿಕಾರಿಗಳೂ ವಾಸಿಸುತ್ತಿದ್ದ ಸಿವಿಲ್ ಲೈನ್ಸ್ ಹಾದು ಸದರ್ ಬಜಾರಿಗೆ ಮೆರವಣಿಗೆಯಲ್ಲಿ ಬಂದರು. ಮೆರವಣಿಗೆಯನ್ನು ಪೋಲಿಸರು ತಡೆದು ಲಾಠಿಗಳಿಂದ ಸ್ವಯಂಸೇವಕರನ್ನು ಹೊಡೆದು ಚದುರಿಸಿದರು.

ಮೆರವಣಿಗೆ ತಡೆದುದನ್ನು ಪ್ರತಿಭಟಿಸಲು ನಾಗಪುರ ಕಾಂಗ್ರೆಸ್ ಸಮಿತಿ ಧ್ವಜಸತ್ಯಾಗ್ರಹವನ್ನು ಆರಂಭ ಮಾಡಿತು. ಸ್ವಯಂಸೇವಕರು ಭಾರತದ ಎಲ್ಲೆಡೆಯಿಂದ ತಂಡತಂಡವಾಗಿ ಬರಲಾರಂಭಿಸಿದರು. ನಾಗಪುರ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಜಮನಾಲಾಲ್ ಬಜಾಜರ ದಸ್ತಗಿರಿಯಾದೊಡನೆ ಸತ್ಯಾಗ್ರಹಕ್ಕೆ ತಂಡಗಳನ್ನು ಕಳಿಸುವ ಜವಾಬ್ದಾರಿ ಹರ್ಡೀಕರರ ಮೇಲೆ ಬಿತ್ತು. ಡಾ॥ ಹರ್ಡೀಕರರು ಈ ಸತ್ಯಾಗ್ರಹದಲ್ಲಿ ಬಹು ಪ್ರಮುಖ ಪಾತ್ರ ವಹಿಸಿದರು.

ಉಮಾಬಾಯಿ ಕುಂದಾಪುರ, ಕೃಷ್ಣಾಬಾಯಿ ಪಣಜಿಕರ್, ಕಮಲಾದೇವಿ ಚಟ್ಟೋಪಾಧ್ಯಾಯ, ಕಸನ್‌ಧಮಟ್‌ಕರ್, ಸೋಫಿಯಾ ಸೋಮಾಜಿ ಇವರು ಮಹಿಳಾ ಸತ್ಯಾಗ್ರಹಿಗಳ ಸಂಘಟನೆ ಮಾಡಿದರು. 17ನೇ ತಾರೀಖು ರಾತ್ರೆ ಇದ್ದಕ್ಕಿದ್ದಂತೆ ಸತ್ಯಾಗ್ರಹ ಶಿಬಿರವನ್ನು ಮುತ್ತಿಗೆ

ಹಾಕಲಾಯಿತು. ಪೋಲೀಸರು ಶಿಬಿರದಲ್ಲಿದ್ದ ಡಾ॥ ಹರ್ಡೀಕರ್, ವಿನೋಬಾ ಭಾವೆ ಮುಂತಾದ 200 ಜನರನ್ನು ದಸ್ತಗಿರಿ ಮಾಡಿದರು. ಸತ್ಯಾಗ್ರಹಿಗಳಿಂದ ನಾಗಪುರ ಸೆರೆಮನೆ ತುಂಬಿಹೋಗಿ, ಅಂಕೋಲಾ ಮುಂತಾದ ಮಧ್ಯಪ್ರಾಂತದ ಇತರ ಸೆರೆಮನೆಗಳಿಗೂ ಜನರನ್ನು ರವಾನಿಸಬೇಕಾಯಿತು. ಬಂಧಿತರನ್ನು ಸೆರೆಮನೆಯಲ್ಲಿ ಅಮಾನುಷ ರೀತಿಯಲ್ಲಿ ಕಾಣಲಾಗುತ್ತಿತ್ತು. ಗುಜರಾತಿನಿಂದ ವಲ್ಲಭಭಾಯಿ ಪಟೇಲರ ಕರೆಗೆ ಓಗೊಟ್ಟು ಅಸಂಖ್ಯಾತ ಸತ್ಯಾಗ್ರಹಿಗಳು ಬಂದರು. ಒಟ್ಟು ಈ ಸತ್ಯಾಗ್ರಹದಲ್ಲಿ 1750 ಮಂದಿ ಸತ್ಯಾಗ್ರಹಿಗಳು ಬಂಧನಕ್ಕೊಳಗಾದರು. ಮೈಸೂರು ಸಂಸ್ಥಾನದಿಂದ ಕೆ. ಜೀವಣ್ಣರಾವ್, ಬಿ. ರಾಮಸ್ವಾಮಿ ಅಯ್ಯಂಗಾರ್, ಬಿ. ರಂಗನಾಥರಾವ್, ಟಿ. ಎಸ್. ರಾಮಸ್ವಾಮಿಶಾಸ್ತ್ರಿ, ಸಿ. ರಾಜಗೋಪಾಲ್, ಎಂ. ವಿ. ಆರ್. ಭಾರದ್ವಾಜ್ ಇವರು ಈ ಧ್ವಜ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. ರಾಜಗೋಪಾಲಾಚಾರ್ ಅವರನ್ನು ಅವರಣ್ಣ ಬಂದು ಬಿಡಿಸಿಕೊಂಡು ಹೋದರು. ಉಳಿದವರಿಗೆ ಸಜಾ ಆಯಿತು.

ಆಗಸ್ಟ್ 18ನೇ ತಾರೀಖು ಸರ್ದಾರ್ ಪಟೇಲರ ನೇತೃತ್ವದಲ್ಲಿ ಒಂದು ಶಾಂತಿಯುತವಾದ ಮೆರವಣಿಗೆ ನಡೆಯಿತು. ಧ್ವಜ ಹಿಡಿದ ಸತ್ಯಾಗ್ರಹಿಗಳನ್ನು ಅಂದು ಪೋಲೀಸರು ಬಂಧಿಸಲಿಲ್ಲ. ಈ ರೀತಿ ರಾಷ್ಟ್ರಧ್ವಜವನ್ನು ಹಿಡಿದು ಮೆರವಣಿಗೆ ಮಾಡುವ ಹಕ್ಕನ್ನು ಸ್ಥಾಪಿಸಲಾಯಿತು. ನಾಗಪುರ ಧ್ವಜ ಸತ್ಯಾಗ್ರಹಕ್ಕೆ ದೊರೆತ ಯಶಸ್ಸಿನಿಂದ ಕಾಂಗ್ರೆಸ್ಸಿನಲ್ಲಿ ಹೊಸದೊಂದು ಚೈತನ್ಯ ಮೂಡಿತು.

ನಾಗಪುರ ಧ್ವಜ ಸತ್ಯಾಗ್ರಹದಲ್ಲಿ ಜೈಲುಗಳು ಹಿಡಿಸಲಾರದಷ್ಟು ಜನ ಭಾಗವಹಿಸಿದ್ದರಾದರೂ, ಜೈಲಿಗೆ ಬಂದ ಅನೇಕರು ಕ್ಷಮಾಪಣೆ ಪತ್ರ ಬರೆದುಕೊಟ್ಟು ಹೊರಬೀಳಹತ್ತಿದರು. ಇದಕ್ಕೆ ಶಿಸ್ತಿನ ಅಭಾವವೇ ಕಾರಣವಾಗಿತ್ತು. ಈ ಬಗ್ಗೆ ಡಾ॥ ಹರ್ಡೀಕರರೂ, ಇತರ ಮಿತ್ರರೂ ಜೈಲಿನಲ್ಲಿ ಕೂತು ವಿಚಾರ ಮಾಡತೊಡಗಿದರು. ಸತ್ಯಾಗ್ರಹಿಗಳಾಗಿ ಆಯ್ಕೆಯಾಗುವವರಿಗೆ ತರಬೇತಿ ನೀಡುವುದು ಅಗತ್ಯವೆಂದೂ, ಅವರ

ಗುಣಮಟ್ಟ ಹೆಚ್ಚಿಸಲೂ, ಅವರಲ್ಲಿ ಶಿಸ್ತು ಸಂಯಮ ತುಂಬಲೂ ಶಿಕ್ಷಣದ ವ್ಯವಸ್ಥೆ ಮಾಡತಕ್ಕದ್ದು ಅಗತ್ಯವೆಂದು ಮನಗಂಡು ಒಂದು ನಿರ್ದಿಷ್ಟ ಯೋಜನೆಯನ್ನು ರೂಪಿಸಿದರು. ಈ ಸಮಾಲೋಚನೆಯ ಫಲವಾಗಿ ಡಾ॥ ಹರ್ಡಿಕರ್, ಕಾಕಾ ಸಾಹೇಬ್ ಕಾಳೇಲ್ಕರ್, ಹಾನಗಲ್ಲಿನ ರಾ.ವೆಂ. ಕರಗುದರಿ, ಕೆ.ಎ. ವೆಂಕಟರಾಮಯ್ಯ, ಎ.ಎಸ್.ಈ. ಅಯ್ಯರ್, ಎಲ್.ಆರ್.ಎಸ್. ಶರ್ಮಾ, ಕೆ. ವಾಸುದೇವರಾವ್, ಚಿತ್ರದುರ್ಗದ ಎಸ್. ವಾಸುದೇವರಾವ್, ಕೊಡಗಿನ ಎಂ.ಸಿ. ಮಾರ್ತಾಂಡ್ ಹಾಗೂ ಎ.ಎಸ್. ತಿಮ್ಮಯ್ಯ, ಅಥಣಿಯ ಜಿ.ಜಿ. ಜೇರೆ, ಕೆರೂರು ಸುಗಣೇಂದ್ರ, ಜೋರಾಪುರದ ಕೃಷ್ಣರಾವ್, ದಾವಣಗೆರೆಯ ಆರ್.ಆರ್. ನಾಯಕ್, ಹೆಬ್ಬಳ್ಳಿಯ ಗುಂಡಾಚಾರ್ಯ, ಬಾಗಲುಕೋಟೆಯ ದಾಮೂ ಅಣ್ಣಲೋಂಗಡೆ, ಮೈಸೂರು ಸಂಸ್ಥಾನದ ಆರ್. ಶ್ರೀನಿವಾಸರಾವ್, ಹೊಸಕೊಪ್ಪ ಕೃಷ್ಣರಾವ್, ಕೆ.ಬಿ. ಕೃಷ್ಣಮೂರ್ತಿ, ಕೆ. ಸಂಪದ್ಗಿರಿರಾಯರು, ಎಚ್.ರಾಮರಾಯರು, ಬ್ರಿಟಿಷ್ ಕರ್ನಾಟಕದ ಎಸ್.ವಿ. ಇನಾಂದಾರ್, ಸುರಜಬಾಲಿ, ವಿಶ್ವನಾಥಶಹಾ, ವಿ. ಎಂ. ಮಂತ್ರಿ, ನೀರಲಕೇರಿ ಶೀನಪ್ಪ, ನಂದಕುಮಾರ ದೇವವಶಿಷ್ಠ, ಬಿಂದುಮಾಧವ ಬುರ್ಲಿ ಇವರ ಪಾತ್ರ ಉಲ್ಲೇಕಾರ್ಹವಾದದ್ದು.

1924ರಲ್ಲಿ ಅಖಿಲ ಭಾರತ ಕಾಂಗ್ರೆಸ್ ಮಹಾಧಿವೇಶನವನ್ನು ಬೆಳಗಾಂನಲ್ಲಿ ಕರೆಯಲು ನಿರ್ಧರಿಸಲಾಯಿತು. ಸ್ವಾತಂತ್ರ್ಯ ಪೂರ್ವದಲ್ಲಿ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ಕರ್ನಾಟಕದಲ್ಲಿ ಸಮಾವೇಶಗೊಂಡುದು ಇದೇ ಮೊದಲು. ಈ ಅಧಿವೇಶನದ ಅಧ್ಯಕ್ಷತೆ ವಹಿಸಿದವರು ಮಹಾತ್ಮ ಗಾಂಧಿಯವರು. ಈ ಅಧಿವೇಶನ ಎಲ್ಲ ದೃಷ್ಟಿಯಿಂದಲೂ ಮಹತ್ವಪೂರ್ಣವಾದದ್ದಾಗಿತ್ತು.

ಗಾಂಧೀಜಿ ಅಧಿವೇಶನಕ್ಕೆ ಕೆಲ ತಿಂಗಳು ಮೊದಲು, ಅನಾರೋಗ್ಯ ನಿಮಿತ್ತ ಜೈಲಿನಿಂದ ಬಿಡುಗಡೆ ಮಾಡಲ್ಪಟ್ಟಿದ್ದರು. ಅವರು ಬಿಡುಗಡೆ ಹೊಂದಿದ ಮೇಲೆ ಬೊಂಬಾಯಿಯ ಜುಹುವಿನಲ್ಲಿ ವಿಶ್ರಾಂತಿ

ಪಡೆಯುತ್ತಿದ್ದರು. ದೇಶದಲ್ಲಿ Pro Changers, No Changers ಇವರ ವಿವಾದ ಬೆಳೆದು ನಿಂತಿತ್ತು. ಸಿ. ಆರ್. ದಾಸ್, ಮೋತಿಲಾಲರಂಥ ಪ್ರಬಲ ನಾಯಕರ ವಿರೋಧವನ್ನು ಎದುರಿಸುವುದು ಗಾಂಧೀಜಿಯವರಿಗೆ ಸುಲಭವಾಗಿರಲಿಲ್ಲ. ಆದರೆ ತಮ್ಮ ಧೋರಣೆಯೇ ಸರಿಯಾದದ್ದು. ಇಂದಲ್ಲ ನಾಳೆ ದೇಶ ತಮ್ಮ ನಿಲುವನ್ನೇ ಮೆಚ್ಚುವುದು ಎಂಬ ಅಚಲವಾದ ನಂಬಿಕೆ ಗಾಂಧೀಜಿಗಿತ್ತು. ಆದ್ದರಿಂದ ಗಾಂಧೀಜಿ ಈ ಅಧಿವೇಶನದಲ್ಲಿ ಮುಖ್ಯವಾಗಿ ರಚನಾತ್ಮಕ ಕಾರ್ಯಕ್ರಮಕ್ಕೆ ಆದ್ಯತೆ ನೀಡಿ ನಿರ್ಣಯ ಮಾಡಿಸಿದರು. ಸೇವಾದಳದ ಸಂಘಟನೆಯನ್ನು ಕೊಂಡಾಡಿ, ಈ ಕೆಲಸಕ್ಕೆ ಮಹತ್ವ ಕೊಡಬೇಕೆಂದು ಜನತೆಗೆ ಕರೆ ಇತ್ತರು. ಈ ಅಧಿವೇಶನಕ್ಕಾಗಿಯೇ ತರಬೇತಿ ಹೊಂದಿದ್ದ 1700 ಸ್ವಯಂಸೇವಕರು ಶಿಸ್ತಿನಿಂದ ಸೇವೆ ಸಲ್ಲಿಸಿದ್ದನ್ನು ಗಾಂಧೀಜಿ ಮುಕ್ತಕಂಠದಿಂದ ಹೊಗಳಿದರು. ಹಿಂದೂಸ್ತಾನಿ ಸೇವಾದಳ ಮತ್ತಷ್ಟು ಸಂಘಟಿತವಾಗಿ ಮುಂದಿನ ಸ್ವಾತಂತ್ರ್ಯ ಚಳುವಳಿಗಳಲ್ಲಿ ಮಹತ್ವದ ಪಾತ್ರವಹಿಸಲು ಈ ಅಧಿವೇಶನ ಪ್ರೇರಣೆ ನೀಡಿತು. ಕರ್ನಾಟಕದ ಕಾರ್ಯಕರ್ತರ ಮೇಲೂ ಈ ಸಮ್ಮೇಳನ ತುಂಬ ಪ್ರಭಾವ ಬೀರಿತು. ಕನ್ನಡಿಗರು ಒಂದುಗೂಡಿ ಕೆಲಸ ಮಾಡುವ ಸುಸಂದರ್ಭವನ್ನು ಈ ಸಮ್ಮೇಳನ ಕಲ್ಪಿಸಿಕೊಟ್ಟಿತು.

1925 ರಿಂದ 1928ರವರೆಗೆ ಗಾಂಧೀಜಿಯ ವರ್ಚಸ್ಸು ಜನತೆಯ ಮೇಲೆ ದಿನೇ ದಿನೇ ಬೆಳೆಯುತ್ತಾ ಬಂದಿತು. ರಾಜಕೀಯ ಚಟುವಟಿಕೆಗಳು ಸ್ವಲ್ಪ ಹಿಂದೆ ಬಿದ್ದುವಾದರೂ, ಪ್ರಚಾರಕಾರ್ಯ ಬಿರುಸುಗೊಂಡಿತು. ಕರ್ನಾಟಕದಲ್ಲಿ ವಿಧಾಯಕ ಕಾರ್ಯಕ್ರಮಗಳು ಬಹು ಹುರುಪಿನಿಂದ ನಡೆದವು. 1923ರಲ್ಲೇ ಮೈಸೂರು ಸಂಸ್ಥಾನದಲ್ಲಿ ಹಿಂದಿ ತರಗತಿಗಳನ್ನು ತೆರೆಯಲಾಗಿತ್ತು. ಪಿ. ಆರ್. ರಾಮಯ್ಯ, ಡಿ.ಕೆ. ಭಾರದ್ವಾಜ್, ತಗಡೂರು ರಾಮಚಂದ್ರ ರಾವ್, ಡಾ॥ ಸಿ.ಬಿ. ರಾಮರಾವ್, ಎಂ. ವೆಂಕಟಕೃಷ್ಣಯ್ಯ, ಕೆ. ಶೇಷಾದ್ರಿ ಮುಂತಾದವರು ಹರಿಜನೋದ್ಧಾರ ಕಾರ್ಯದಲ್ಲಿ

ತೊಡಗಿದ್ದರು. ಆಗಿನ ವಿದ್ಯಾ ಇಲಾಖೆಯ ಡೈರೆಕ್ಟರರಾಗಿದ್ದ ಡಾ॥ ಎನ್. ಎಸ್. ಸುಬ್ಬರಾಯರು ಹಿಂದೀ ಪ್ರಚಾರಕ್ಕೆ ತುಂಬ ನೆರವನ್ನು ಕೊಟ್ಟರು. ಬೆಳಗಾಂನಲ್ಲಿ ಗಂಗಾಧರರಾವ್ ದೇಶಪಾಂಡೆ ಅವರ ಅಧ್ಯಕ್ಷತೆಯಲ್ಲಿ ಹರಿಜನ ಸೇವಕ ಸಂಘ ಸ್ಥಾಪಿಸಲ್ಪಟ್ಟಿತು. ಬಿಜಾಪುರದಲ್ಲಿ ಕಾಕಾ ಕಾರ್ಖಾನಿಸ್ ಅವರು ಹಿಂದು ಬಾಲಿಕಾಶ್ರಮವನ್ನು ಸ್ಥಾಪನೆ ಮಾಡಿದರು. ಸರ್ದಾರ್ ವೀರನಗೌಡ ಪಾಟೀಲರು ಹುಬ್ಬಳ್ಳಿಯಲ್ಲಿ ಹರಿಜನ ಬಾಲಿಕಾಶ್ರಮವನ್ನು ತೆರೆದರು. 1922ರಲ್ಲಿ ಹುಬ್ಬಳ್ಳಿಯಲ್ಲಿ ಭಗಿನಿ ಮಂಡಲವನ್ನು ಸ್ಥಾಪಿಸಲಾಯಿತು. 1926ರಲ್ಲಿ ಖಾದಿ ಸಂಘವೊಂದನ್ನು ಬೆಳಗಾಂನಲ್ಲಿ ಸ್ಥಾಪಿಸಲಾಯಿತು. ಅದರ ಅಧ್ಯಕ್ಷರು ದೇಶಪಾಂಡೆ ಗಂಗಾಧರರಾಯರು, ಕಾರ್ಯದರ್ಶಿಗಳು ಹನುಮಂತರಾವ್ ಕೌಜಲಗಿಯವರು; ತಗಡೂರಿನಲ್ಲಿ ಮತ್ತು ಬದನವಾಳದಲ್ಲಿ ಖಾದಿ ಸಂಸ್ಥೆಗಳನ್ನು ಸ್ಥಾಪಿಸಲಾಯಿತು.

ಆಶ್ರಿತ ಸಂಸ್ಥಾನಗಳು ರಚನಾತ್ಮಕ ಕಾರ್ಯಕ್ರಮಗಳಿಗೇ ತಮ್ಮ ಚಟುವಟಿಕೆಗಳನ್ನು ಸೀಮಿತಗೊಳಿಸಿಕೊಳ್ಳಬೇಕೆಂದು ಅಖಿಲ ಭಾರತ ಕಾಂಗ್ರೆಸ್ ಆದೇಶ ನೀಡಿತ್ತು. ಕಾಲಕ್ರಮದಲ್ಲಿ ಮೈಸೂರಿನ ಜನನಾಯಕರು ತಮಗೂ ರಾಜಕೀಯ ಪ್ರವೇಶಿಸುವ ಸ್ವಾತಂತ್ರ್ಯವಿರಬೇಕೆಂದು ಒತ್ತಾಯ ಮಾಡುತ್ತಾ ಹೋದರು.

1926ನೇ ಮೇ ತಿಂಗಳಲ್ಲಿ ಮಹಾರಾಜರಿಗೆ ಆಪ್ತರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್‌ರವರನ್ನು ಮೈಸೂರಿನ ದಿವಾನರನ್ನಾಗಿ ನೇಮಿಸಲಾಯಿತು. ಹೊಸ ದಿವಾನರು ಅಧಿಕಾರಾರೂಢರಾದ್ದರಿಂದ ಸುಧಾರಣೆಗಳು ಜಾರಿಗೆ ಬಂದು ಮೈಸೂರು ರಾಜಕೀಯದಲ್ಲಿ ಪ್ರಜೆಗಳಿಗೆ ಹೆಚ್ಚಿನ ಸ್ವಾಯತ್ತತೆ ಸಿಗಬಹುದೆಂದು ಪ್ರಜಾಮುಖಂಡರು ಆಶಿಸಿದ್ದರು. ಮಿರ್ಜಾರವರು ಅಧಿಕಾರ ವಹಿಸಿಕೊಂಡ ಕೆಲದಿನಗಳಲ್ಲೇ ಬಿನ್ನಿಮಿಲ್ ಕಾರ್ಮಿಕ ವರ್ಗದವರಿಗೂ, ಆಡಳಿತ ವರ್ಗದವರಿಗೂ ಬೋನಸ್ ಹಂಚಿಕೆ ವಿಷಯದಲ್ಲಿ ಭಿನ್ನಾಭಿಪ್ರಾಯ ತಲೆದೋರಿ, ಕಾರ್ಮಿಕರು ತಮ್ಮ ನ್ಯಾಯಬದ್ಧ ಬೇಡಿಕೆಗಳ ಈಡೇರಿಕೆಗಾಗಿ ಮುಷ್ಕರ

ಹೂಡಿದರು. ಪೋಲೀಸರು ಶಾಂತಿಪಾಲನೆಯ ನೆವದಲ್ಲಿ ಗುಂಡು ಹಾರಿಸಿದರು. ನಾಲ್ಕು ಮಂದಿ ಕಾರ್ಮಿಕರು ಗುಂಡಿನ ಬಾಯಿಗೆ ಬಲಿಯಾದರು. ಮಿರ್ಜಾರವರು ಅಧಿಕಾರಕ್ಕೆ ಬಂದೊಡನೆ ನಡೆದ ಈ ದುರ್ಘಟನೆ ಪ್ರಜೆಗಳ ಮನಸ್ಸಿನಲ್ಲಿ ಕಳವಳವನ್ನೂ, ಜಿಗುಪ್ಸೆಯನ್ನೂ ಹುಟ್ಟಿಸಿದವು. ಸಾರ್ವಜನಿಕರು ಜಾಗೃತಗೊಂಡರು. ಈ ದುರ್ಘಟನೆ ರಾಜಕೀಯ ಹೋರಾಟಕ್ಕೆ ಇಂಬು ಕೊಟ್ಟಿತು.

1928ರಲ್ಲಿ ಮೈಸೂರು ಸಂಸ್ಥಾನದಲ್ಲಿ ಮತ್ತೊಂದು ದುರ್ಘಟನೆ ನಡೆಯಿತು. 'ಬೆಂಗಳೂರು ಸುಲ್ತಾನ್‌ಪೇಟೆ ಗಣಪತಿ ಗಲಾಟೆ' ಎಂಬ ಹೆಸರಿನಿಂದ ಪ್ರಸಿದ್ಧಿಗೆ ಬಂದ ಹಿಂದೂ ಮುಸ್ಲಿಂ ಕೋಮುವಾರು ಘರ್ಷಣೆ ಅಹಿತ ವಾತಾವರಣವನ್ನುಂಟುಮಾಡಿತು. ಈ ಗಲಭೆಯನ್ನಡಗಿಸಲು ಪ್ರಭುತ್ವದವರು ಅನೇಕ ಕಡೆ ಗುಂಡು ಹಾರಿಸಿದರು. ಈ ಘಟನೆಯಿಂದ ರೋಸಿದ ಜನನಾಯಕರು ಆಡಳಿತದ ಮೇಲೆ ಅಂಕುಶ ಇಟ್ಟುಕೊಳ್ಳಲು ಬಯಸಿ, ಮಹಾರಾಜರ ಆಶ್ರಯದಲ್ಲಿ ಪೂರ್ಣ ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಬೇಕಾಗಿದ್ದರ ಅಗತ್ಯತೆಯನ್ನು ಮನಗಂಡರು.

1928ರಲ್ಲಿ ರಾಜಕೀಯ ಚಟುವಟಿಕೆಗಳ ಆಧಾರ ಸ್ತಂಭಗಳಾಗಿದ್ದವರು ಬೆಂಗಳೂರಿನ ಡಿ.ವಿ. ಗುಂಡಪ್ಪ, ಸಂಪಿಗೆ ವೆಂಕಟಪತಯ್ಯ, ಎಚ್.ವಿ. ಸುಬ್ರಹ್ಮಣ್ಯಂ, ಜಮಖಂಡಿ ಭೀಮರಾವ್, ವೀರಕೇಸರಿ ಸೀತಾರಾಮಶಾಸ್ತ್ರೀ, ಟಿ.ಟಿ. ಶರ್ಮ, ರಾಮಲಾಲ್ ತಿವಾರಿ, ಮೈಸೂರಿನ ಎಂ. ವೆಂಕಟಕೃಷ್ಣಯ್ಯ, ತಗಡೂರು ರಾಮಚಂದ್ರರಾಯರು, ಹೊಸಕೊಪ್ಪ ಕೃಷ್ಣರಾಯರು, ತುಮಕೂರಿನ ಕೆ. ರಂಗಯ್ಯಂಗಾರ್ಯರು, ಮದ್ದೂರಿನ ಎಚ್. ಕೆ. ವೀರಣ್ಣಗೌಡರು.

1929 ಒಂದು ಮಹತ್ವದ ವರ್ಷ; ಇಡೀ ರಾಷ್ಟ್ರವನ್ನು ಮುಂದಿನ ಮಹತ್ವಪೂರಿತ ಹೋರಾಟಕ್ಕೆ ತೊಡಗಿಸುವ ಪ್ರಚಂಡ ಪ್ರಯತ್ನಗಳು ನಡೆದ ವರ್ಷ. ಲಾಹೋರಿನಲ್ಲಿ ಕಾಂಗ್ರೆಸ್ ಮಹಾಧಿವೇಶನ ನಡೆದು, ಅದು ಬಿಡುವಿಲ್ಲದ ಸಮರ ಸನ್ನದ್ಧತೆಯ ಕಾರ್ಯಕ್ರಮಗಳನ್ನು

ರೂಪಿಸಿತು. ಗಾಂಧಿಯವರು ಇಡೀ ದೇಶವನ್ನು ಸುತ್ತಾಡಿ ಜನರನ್ನು ಸಂಘಟನೆ ಮಾಡಿದರು. ಕಾರ್ಮಿಕರ ಜಾಗೃತಿ ಹಾಗೂ ಸಂಘಟನೆ ಪ್ರಥಮ ಬಾರಿಗೆ ಭಾರತದಲ್ಲಿ ದೊಡ್ಡ ಪ್ರಮಾಣದಲ್ಲಿ ಬೆಳೆಯಿತು. ಕಾರ್ಮಿಕ ನಾಯಕರು, ಕಾರ್ಮಿಕರು ಹೆಚ್ಚು ಸಂಖ್ಯೆಯಲ್ಲಿ ದೇಶದ ಅನೇಕ ಕಡೆ ದಸ್ತಗಿರಿ ಮಾಡಲ್ಪಟ್ಟರು. ಅವರಲ್ಲಿ ಅನೇಕರಿಗೆ ದೀರ್ಘಾವಧಿ ಶಿಕ್ಷೆಗಳಾದವು.

1929ರ ಜೂನ್ 2ನೇ ತಾರೀಖು ಸಮಾವೇಶಗೊಂಡ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಜನವರಿ 26ನೇ ತಾರೀಖನ್ನು ಪ್ರತಿ ವರ್ಷ ಸ್ವಾತಂತ್ರ್ಯ ದಿನಾಚರಣೆಯ ದಿನವನ್ನಾಗಿ ಆಚರಿಸಬೇಕೆಂದು ನಿರ್ಧಾರಮಾಡಿತು. 1930ರ ಜನವರಿ 26ನೇ ತಾರೀಖು ಸ್ವಾತಂತ್ರ್ಯ ದಿನಾಚರಣೆಯನ್ನು ದೇಶದಾದ್ಯಂತ ಮಹಾ ವೈಭವದಿಂದ ಆಚರಿಸಲಾಯಿತು. ಜನರ ರಾಜಕೀಯ ಜಾಗೃತಿಗೆ ಇದು ಪ್ರತ್ಯಕ್ಷ ನಿದರ್ಶನವಾಗಿತ್ತು.

ಬ್ರಿಟಿಷರು ವ್ಯಾಪಾರಕ್ಕಾಗಿಯೇ ಈ ದೇಶಕ್ಕೆ ಬಂದವರು; ಅವರು ಇಲ್ಲಿಂದ ಕಚ್ಚಾಮಾಲುಗಳನ್ನು ತಮ್ಮ ದೇಶಕ್ಕೆ ಬೃಹತ್ ಪ್ರಮಾಣದಲ್ಲಿ ರಫ್ತು ಮಾಡಲು ಆರಂಭಿಸಿದರು. ಕಾಲಕ್ರಮದಲ್ಲಿ ಇಂಗ್ಲೆಂಡಿನಿಂದ ಭಾರತಕ್ಕೆ ಆಮದಾಗುತ್ತಿದ್ದ ಪದಾರ್ಥಕ್ಕಿಂತ, ಭಾರತದಿಂದ ದೋಚುವ ಪದಾರ್ಥಗಳೇ ಅಧಿಕವಾಯಿತು. ಹೀಗಾಗಿ ಭಾರತಕ್ಕೆ ಬರುವ ಅನೇಕ ಹಡಗುಗಳು ಬಹುತೇಕ ಖಾಲಿ ಬರುತ್ತಿದ್ದವು. ಖಾಲಿ ಬರುವ ಈ ಹಡಗುಗಳ ಸಮತೋಲನ ರಕ್ಷಿಸುವ ದೃಷ್ಟಿಯಿಂದ, ಬ್ರಿಟಿಷ್ ಸರ್ಕಾರ ಒಂದು ಅತಿ ಬುದ್ಧಿವಂತಿಕೆಯ ಕಾರ್ಯಕೈಗೊಂಡಿತು. ಖಾಲಿ ಹಡಗುಗಳಲ್ಲಿ ಬ್ರಿಟನ್ನಿನಲ್ಲಿ ಉತ್ಪನ್ನವಾದ ಉಪ್ಪನ್ನು ತುಂಬಿ ಕಳಿಸತೊಡಗಿತು. ಭಾರತದಲ್ಲೇ ಯಥೇಚ್ಛವಾಗಿ ಉಪ್ಪು ತಯಾರಾಗುತ್ತಿದ್ದು, ಅದರ ಬೆಲೆ ಸಹಜವಾಗಿ ಇಂಗ್ಲೆಂಡಿನಿಂದ ತಂದ ಉಪ್ಪಿಗಿಂತ ಅಗ್ಗವಾಗಿತ್ತು. ಭಾರತದಲ್ಲಿ ಉತ್ಪನ್ನವಾಗುವ ಉಪ್ಪಿನ ಮೇಲೆ ಕರ ಹೇರುವುದರ ಮೂಲಕ, ತಮ್ಮ ಸರಕನ್ನು

ಮಾರುವುದೊಂದೇ ಅವರಿಗಿದ್ದ ಮಾರ್ಗ. ಇದಕ್ಕಾಗಿ ಭಾರತದಲ್ಲಿ ಉತ್ಪನ್ನವಾದ ಉಪ್ಪಿನ ಮೇಲೆ ತೆರಿಗೆ ವಿಧಿಸಿದರು. ಈ ಅನ್ಯಾಯದ ಕರಭಾರದ ವಿರುದ್ಧ ದಂಗೆ ಏಳುವುದರ ಮೂಲಕ ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ಆಕ್ರಮಣ ಮಾಡಬೇಕೆಂದು ಗಾಂಧೀಜಿ ನಿರ್ಧರಿಸಿದರು.

1929ರ ಸ್ವಾತಂತ್ರ್ಯ ದಿನಾಚರಣೆಯನ್ನು ದೇಶದಾದ್ಯಂತ ಅತಿ ಶಿಸ್ತಿನಿಂದ ಆಚರಿಸಲಾದದ್ದನ್ನು ಗಮನಿಸಿದ ಗಾಂಧೀಜಿ ಉಪ್ಪಿನ ಕಾಯಿದೆಯನ್ನು ಮುರಿಯಲು ಜನತೆಗೆ ಕರೆ ನೀಡಿದರು. ಗಾಂಧೀಜಿ ತುಂಬ ರೋಮಾಂಚಕಾರಿಯಾದಂಥ ಚಳುವಳಿಯನ್ನು ಸಂಘಟಿಸುವ ಪ್ರಯತ್ನದಲ್ಲಿದ್ದಾರೆಂದು ಬಗೆದಿದ್ದ ಜನಕ್ಕೆ ಈ ಚಳುವಳಿ ಬಹಳ ಸಪ್ಪೆ ಎನಿಸಿತು. ದೇಶದ ಯಾವುದೋ ಮೂಲೆಯಲ್ಲಿ ಕೂತು ಒಂದು ಹಿಡಿ ಉಪ್ಪು ತಯಾರುಮಾಡುವುದರಿಂದ ಬ್ರಿಟಿಷರನ್ನು ಭಾರತ ಬಿಟ್ಟೋಡಿಸಲು ಸಾಧ್ಯವಾದೀತೆ ಎಂದು ಸಂದೇಹಪಟ್ಟರು ಗಾಂಧೀಜಿಯ ಈ ಚಳುವಳಿಯ ಖರಾಮತ್ತೇನು ಎಂಬುದು ಯಾರಿಗೂ ತಿಳಿಯದಾಯಿತು.

ಗಾಂಧೀಜಿ ತಮ್ಮ ಆತ್ಮಸಾಕ್ಷಿಗನುಗುಣವಾಗಿ ವೈಸರಾಯರಿಗೆ ಪತ್ರ ಬರೆದು ತಾವು ಉಪ್ಪಿನ ಸತ್ಯಾಗ್ರಹ ಆರಂಭಿಸುವುದಾಗಿ ತಿಳಿಸಿದರು. ಉಪ್ಪಿನ ಮೇಲೆ ಹೇರಿದ ಅನ್ಯಾಯದ ತೆರಿಗೆಯನ್ನು ತೆಗೆದುಹಾಕಿ, ತಮ್ಮ ಹೋರಾಟದ ನಿರ್ಧಾರವನ್ನು ಕೊನೆಗೊಳಿಸಬೇಕೆಂದು ವಿನಂತಿ ಮಾಡಿಕೊಂಡರು. ವೈಸರಾಯ್ ಲಾರ್ಡ್ ಇರ್ವಿನ್ ಗಾಂಧೀಜಿಯ ಪತ್ರಕ್ಕೆ ಉತ್ತರವೇನೋ ಕೊಟ್ಟರು. ಆದರೆ ಆ ಉತ್ತರ ಮುನ್ನೆಚ್ಚರಿಕೆಯ ರೀತಿಯಲ್ಲಿತ್ತು.

ಸಬರಮತಿಯಿಂದ ದಂಡಿ ಸಮುದ್ರ ದಂಡೆಗೆ 240 ಮೈಲಿಗಳ ಪ್ರಯಾಣ. ಗಾಂಧೀಜಿ ತಾವು 1920ನೇ ಮಾರ್ಚ್ 12ನೇ ತಾರೀಖು ದಂಡಿ ಪ್ರಯಾಣ ಆರಂಭಿಸುವುದಾಗಿ ತಿಳಿಸಿ ಆಶ್ರಮದಲ್ಲಿದ್ದ ಇಂಗ್ಲಿಷ್

ಕ್ವೇಕರ್ ರೆಜಿನಾಲ್ಡ್‌ರೇನಾಲ್ಡ್ಸ್ ಅವರ ಮುಖಾಂತರ ವೈಸರಾಯ್‌ಗೆ ಒಂದು ಪತ್ರ ಕಳುಹಿಸಿದರು. ಆಯ್ದ 79 ಜನ ಸತ್ಯಾಗ್ರಹಿಗಳನ್ನು ಕೂಡಿಕೊಂಡು ಗಾಂಧೀಜಿ ಪ್ರಪಂಚದಲ್ಲೇ ಬಲಿಷ್ಠವಾದ ರಾಷ್ಟ್ರವೊಂದನ್ನು ಭಾರತದಿಂದ ಒದ್ದೋಡಿಸುವ ರಣೋತ್ಸಾಹದಿಂದ ತಮ್ಮ ದಂಡಿಯಾತ್ರೆ ಆರಂಭಮಾಡಿದರು. ಗಾಂಧೀಜಿ ಸ್ವತಃ ಉಪ್ಪಿನ ಕಾಯಿದೆ ಮುರಿಯುವವರೆಗೆ ಬೇರೆ ಯಾರೂ ಸತ್ಯಾಗ್ರಹ ಹೂಡಕೂಡದೆಂಬ ಸೂಚನೆಯನ್ನು ಎಲ್ಲ ಕಡೆಗೂ ಕಳಿಸಲಾಗಿತ್ತು. ಪೂರ್ವಭಾವಿ ಸಿದ್ಧತೆಗಾಗಿ ವಲ್ಲಭಬಾಯ್ ಪಟೇಲರನ್ನು ದಂಡೀಗೆ ಕಳಿಸಲಾಗಿತ್ತು. ಈ ಪೂರ್ವಸಿದ್ಧತೆಯ ಪರಿಣಾಮವಾಗಿ ಜನಜಾಗೃತಿ ಆಯಿತು. ಜನರ ಭಾವನೆಗಳು ಕೆರಳಿದವು.

ಗಾಂಧೀಜಿ ದಂಡಿ ಯಾತ್ರೆ ಆರಂಭಮಾಡಿ ಒಂದು ವಾರ ಕೂಡ ಆಗಿರಲಿಲ್ಲ. ಯಾವುದೇ ಆತಂಕಗೊಳ್ಳದಂತೆ ತೋರ್ಪಡಿಸಿಕೊಳ್ಳುತ್ತಿದ್ದ ಸರ್ಕಾರ ಒಮ್ಮೆಲೇ ತನ್ನ ಸಮತೋಲನ ಕಳೆದುಕೊಂಡಿತು. ಮಾರ್ಚ್ ಮೊದಲನೆಯ ವಾರದಲ್ಲಿ ವಲ್ಲಭಭಾಯ್ ಪಟೇಲರನ್ನು ದಸ್ತಗಿರಿ ಮಾಡಿ ಅವರಿಗೆ 4 ತಿಂಗಳು ಕಠಿಣಶಿಕ್ಷೆ ವಿಧಿಸಲಾಯಿತು. ಜಮೀನ್ದಾರರಿಗೆ, ಸಾಹುಕಾರರಿಗೆ, ವರ್ತಕರಿಗೆ ಸರ್ಕಾರ ತಾಕೀತು ಮಾಡಿ, ಯಾರೂ ಸತ್ಯಾಗ್ರಹಿಗಳಿಗೆ ನೆರವು ನೀಡಕೂಡದೆಂದು ಕಟ್ಟಾಜ್ಞೆ ಹೊರಡಿಸಿತು. 'ರಾಜದ್ರೋಹ ನನ್ನ ಸ್ವಧರ್ಮ' ಎಂದು ಗಾಂಧೀಜಿ ಘೋಷಿಸಿದರು. ಗಾಂಧೀಜಿ ದಂಡಿ ಕಡೆಗೆ ನಡೆಯುತ್ತಿದ್ದಂತೆ ಸಹಸ್ರಾರು ಜನ ಅವರನ್ನು ಹಿಂಬಾಲಿಸಿದರು. ದಿನ ದಿನಕ್ಕೆ ಈ ಸಂಖ್ಯೆ ಏರುತ್ತಲೇ ಹೋಯಿತು. ಗಾಂಧೀಜಿ ದಂಡಿಯನ್ನು ಏಪ್ರಿಲ್ 6ನೇ ತಾರೀಖು ಮುಟ್ಟಿ ಸಮುದ್ರದ ನೀರಿನಿಂದ ಉಪ್ಪು ತಯಾರಿಸಿ ಮಾರಾಟ ಮಾಡಿದರು. ಅವರು ಕಾಯದೆ ಭಂಗ ಮಾಡಿದ ಮೇಲೆ ಭಾರತಾದ್ಯಂತ ಸಹಸ್ರಾರು ಜನ ಒಮ್ಮೆಗೇ ಉಪ್ಪಿನ ಸತ್ಯಾಗ್ರಹದಲ್ಲಿ ಪಾಲುಗೊಂಡರು. ಬ್ರಿಟಿಷ್ ಸರ್ಕಾರದ ಎದೆ ಝಲ್ಲೆಂದಿತು. ಪೋಲೀಸರು 1930ರ ಏಪ್ರಿಲ್ 7ನೇ ತಾರೀಖು ರಾತ್ರಿ ಒಂದು ಘಂಟೆಯಲ್ಲಿ ಗಾಂಧೀಜಿ ಅವರನ್ನು ಬಂಧಿಸಿ ಯರವಾಡಾ ಸೆರೆಮನೆಗೆ ಕರೆದೊಯ್ದರು.

ಗಾಂಧೀಜಿಯ ಬಂಧನದ ವಿಷಯ ಕಾಳ್ಗಿಚ್ಚಿನಂತೆ ದೇಶದಾದ್ಯಂತ ಹರಡಿತು. ಸತ್ಯಾಗ್ರಹಿಗಳಿಗೆ ನೆರವು ನೀಡುವುದು, ಆಶ್ರಯ ಕೊಡುವುದು, ಅಪರಾಧವೆಂದು ಸರ್ಕಾರ ಜಾಹೀರುಮಾಡಿತು.

ಗಾಂಧೀಜಿ ಉಪ್ಪಿನ ಕಾಯಿದೆ ಮುರಿದ ದಿನವೇ ಬೆಳಗಾವಿಯಲ್ಲಿ ಗಂಗಾಧರರಾವ್ ದೇಶಪಾಂಡೆಯವರು ಕರಕೊಡದ ಉಪ್ಪನ್ನು ಸಾರ್ವಜನಿಕ ಸಭೆಯಲ್ಲಿ ಮಾರಾಟ ಮಾಡಿದರು. ನಾರಾಯಣರಾವ್ ಜೋಷಿ, ಜೀವಣ್ಣರಾವ್ ಯಾಳಗಿ, ಅನಂತರಾವ್ ದಾಬಡೆ ಅದನ್ನು ಕೊಂಡರು. ಮಾರನೆಯ ದಿನ ಈ ನಾಲ್ವರನ್ನೂ ಬಂಧಿಸಲಾಯಿತು. ಅವರುಗಳ ದಸ್ತಗಿರಿಯಾದ್ದರಿಂದ ಕರ್ನಾಟಕದಾದ್ಯಂತ ಹರತಾಳವನ್ನು ಆಚರಿಸಲಾಯಿತು.

ಗಾಂಧೀಜಿ ದಂಡಿಯಾತ್ರೆ ಕೈಗೊಂಡ ಕೂಡಲೇ ಕಾರ್ನಾಡ ಸದಾಶಿವರಾಯರು, ಗಂಗಾಧರರಾವ್ ದೇಶಪಾಂಡೆ, ತಿಮ್ಮಪ್ಪನಾಯಕ್, ಪರಮಣ್ಣ ಹೊಸಮನಿ, ದಿವಾಕರ ರಂಗರಾಯರು, ಹನುಮಂತರಾವ್ ಕೌಜಲಗಿ, ಡಾ॥ ಎನ್. ಎಸ್. ಹರ್ಡೀಕರ್ ಇವರು ಸಮಾಲೋಚನೆ ನಡೆಸಿ ಅಂಕೋಲಾದಲ್ಲಿ ಉಪ್ಪಿನ ಸತ್ಯಾಗ್ರಹವನ್ನು ಆರಂಭಿಸಲು ನಿಶ್ಚಯಿಸಿದರು. ಈ ಸಮಿತಿ, ಸತ್ಯಾಗ್ರಹ ನಿರ್ದೇಶನ ಮಾಡಲು ಟೇಕೂರು ಸುಬ್ರಹ್ಮಣ್ಯಂ ಮತ್ತು ಶಂಕರರಾವ್ ಗುಳವಾಡಿ ಇವರನ್ನು ಸತ್ಯಾಗ್ರಹ ಸಮಿತಿಯ ಸದಸ್ಯರೆಂದು ಘೋಷಣೆ ಮಾಡಿತು. ಹಿಂದೂಸ್ಥಾನಿ ಸೇವಾದಳದ ವತಿಯಿಂದ ಸತ್ಯಾಗ್ರಹಿಗಳ ಸಂಗ್ರಹ ಮತ್ತು ಸಂಘಟನೆಯ ಕಾರ್ಯ ಆರಂಭಿಸಲಾಯಿತು. ಸಮುದ್ರ ದಂಡೆಯ ಹಳ್ಳಿಗಳಲ್ಲೆಲ್ಲಾ ಸತ್ಯಾಗ್ರಹ ಶಿಬಿರಗಳನ್ನು ತೆರೆಯಲಾಯಿತು. ಉಪ್ಪಿನ ಸತ್ಯಾಗ್ರಹದಲ್ಲಿ ಕರ್ನಾಟಕದ ಪಾತ್ರ ಅಮೋಘವಾದದ್ದು.

ಶಂಕರರಾವ್ ಗುಲ್ವಾಡಿ, ಅನಂತ ಮಹಲೆ, ಸ್ವಾಮಿ ವಿದ್ಯಾನಂದ, ಎಂ.ಪಿ. ನಾಡಕರ್ಣಿ, ಬಾಸಗೋಡ್ ರಾಮಾನಾಯ್ಕ ಇವರು ಉತ್ತರಕನ್ನಡ ಜಿಲ್ಲೆಯಲ್ಲೆಲ್ಲ ಪ್ರಚಾರ ಪ್ರವಾಸ ಕೈಗೊಂಡರು.

ಅಂಕೋಲದಲ್ಲಿ ಉಪ್ಪಿನ ಸತ್ಯಾಗ್ರಹದ ಸಿದ್ಧತಾಕಾರ್ಯಗಳನ್ನು ತಿಮ್ಮಪ್ಪನಾಯಕರು ಕೈಗೊಂಡರು. ಡಾ॥ ಹರ್ಡೀಕರ್ ಮತ್ತು ಕೌಜಲಗಿ ಹನುಮಂತರಾಯರು ದಂಡಿ ಕಡೆಗೆ ಹೊರಟಿದ್ದ ಗಾಂಧೀಜಿಯವರನ್ನು ಜಂಬಸೂರಿನಲ್ಲಿ ಭೇಟಿಮಾಡಿ ಕರ್ನಾಟಕದಲ್ಲಿ ಸತ್ಯಾಗ್ರಹ ಹೂಡಲು ಅನುಮತಿ ಕೋರಿದರು. ಮಾರ್ಚ್ 27ರಂದು ಹುಬ್ಬಳ್ಳಿಯ ಬೃಹತ್ ಸಭೆಯೊಂದರಲ್ಲಿ ಮಾತನಾಡುತ್ತಾ ಡಾ॥ ಹರ್ಡೀಕರ್‌ರವರು, ಗಾಂಧೀಜಿಯ ದಂಡೀಯಾತ್ರೆಯ ವೈಭವವನ್ನು ಸಭೆಗೆ ಪರಿಚಯ ಮಾಡಿಕೊಟ್ಟು ಗುಜರಾತಿನ ಜನರ ಸಂಭ್ರಮ ಕುರಿತು ವಿವರಣೆ ನೀಡಿದರು. ಕರ್ನಾಟಕದಲ್ಲಿ ನಡೆಯುವ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಲು ಜನತೆಗೆ ಕರೆ ನೀಡಿ, ವಿದ್ಯಾರ್ಥಿಗಳು, ಯುವಕರು ಈ ಚಳುವಳಿಯಲ್ಲಿ ಅಧಿಕ ಸಂಖ್ಯೆಯಲ್ಲಿ ಧುಮುಕಬೇಕೆಂದು ಮನವಿ ಮಾಡಿಕೊಂಡರು. ಸತ್ಯಾಗ್ರಹಿಗಳಾಗಿ ದಾಖಲಾಗಲು ನಾ ಮುಂದು ತಾ ಮುಂದು ಎಂದು ಹುಬ್ಬಳ್ಳಿ, ಬೆಳಗಾಂ ಮತ್ತು ಮಂಗಳೂರು ಶಿಬಿರಗಳಿಗೆ ಜನ ಧಾವಿಸಿ ಬಂದರು. ಕರಾವಳಿ ಜಿಲ್ಲೆಗಳಿಗೆ ಮಾತ್ರ ಚಳುವಳಿಯನ್ನು ಸೀಮಿತಗೊಳಿಸಿದ್ದರೂ, ಸತ್ಯಾಗ್ರಹಿಗಳು ಮಾತ್ರ ಕರ್ನಾಟಕದ ಎಲ್ಲೆಡೆಯಿಂದ ಬರಲಾರಂಭಿಸಿದರು. ಏಪ್ರಿಲ್ 13ರ ದಿನ ಜಲಿಯನ್ ವಾಲಾಬಾಗ್ ಹತ್ಯಾಕಾಂಡ ನಡೆದದ್ದು, ಆ ದಿನಾಂಕವನ್ನೇ ಉಪ್ಪಿನ ಸತ್ಯಾಗ್ರಹ ಆರಂಭಿಸಲು ಗೊತ್ತುಪಡಿಸಲಾಯಿತು. ಸತ್ಯಾಗ್ರಹಿಗಳ ತಂಡಗಳು ಸಿರಸಿ, ಸಿದ್ದಾಪುರ, ಹೊನ್ನಾವರ, ಕುಮುಟಾಗಳಿಂದ ಅಂಕೋಲಗೆ ಹೊರಟವು. ಏಪ್ರಿಲ್ 6ನೇ ತಾರೀಖು ಹುಬ್ಬಳ್ಳಿಯಿಂದ ಅಂಕೋಲಗೆ ಸ್ವಯಂಸೇವಕರ ತಂಡವೊಂದು ದಿವಾಕರರ ನೇತೃತ್ವದಲ್ಲಿ ಮೆರವಣಿಗೆಯಲ್ಲಿ ಹೊರಟಿತು. ಬಿಂದು ಮಾಧವಬುರ್ಲಿ ಇವರು ಮತ್ತು ಪರಮಣ್ಣ ಹೊಸಮನಿ ಈ ಜಾಥಾದ ಮುಂದಾಳುತನ ವಹಿಸಿದ್ದರು. ಪೊಲೀಸ್ ಜಿಲ್ಲಾ ಸೂಪರಿಂಟೆಂಡೆಂಟರು ಪೊಲೀಸ್ ಪಡೆಯೊಡನೆ ಅಂಕೋಲೆಯಲ್ಲಿ ಮೊಕ್ಕಾಂ ಮಾಡಿದರು. ಜಿಲ್ಲಾ ಮ್ಯಾಜಿಸ್ಟ್ರೇಟರು ಬೇಲೀಕೇರಿಯಲ್ಲಿ ಠಾಣ್ಯ ಹೂಡಿದರು. ಸತ್ಯಾಗ್ರಹಿಗಳಿಗೆ

ದತ್ತಾಭಾಯ್ ಸಾರ್ವೇಕರ್ ಮತ್ತು ಶಾಮರಾವ್ ಶೆಣೈ ವಸತಿ ಸೌಕರ್ಯ ಕಲ್ಪಿಸಿಕೊಟ್ಟರು. ಪ್ರತಿ ಸಂಜೆ ಅಂಕೋಲಾದಲ್ಲಿ ಸತ್ಯಾಗ್ರಹದ ವಿವರಗಳನ್ನು ನೀಡಲು ಸಾರ್ವಜನಿಕ ಸಭೆಗಳು ನಡೆಯುತ್ತಿದ್ದವು. ಹನುಮಂತರಾವ್ ಕೌಜಲಗಿಯವರು ತಮ್ಮ ಮಾತುಗಳಿಂದ ಸಭಿಕರನ್ನು ಪುಳಕಿತಗೊಳಿಸುತ್ತಿದ್ದರು.

1930ನೇ ಏಪ್ರಿಲ್ 13ನೇ ತಾರೀಖು ಅಂಕೋಲಾದ ಇತಿಹಾಸದಲ್ಲಿ ಚರಿತಾರ್ಥ ದಿನ. ಪ್ರಾತಃಕಾಲ ಪ್ರಭಾತ್‌ಫೇರಿ ನಡೆಯಿತು. ಎಲ್ಲೆಲ್ಲೂ ಹಬ್ಬದ ದಿನದ ಸಡಗರ, ಎಲ್ಲ ಮನೆಗಳನ್ನೂ ಹೂವಿನಿಂದ ಅಲಂಕರಿಸಿ, ಮಾವಿನ ತಳಿರಿನ ತೋರಣಗಳನ್ನು ಬಾಗಿಲಿಗೆ ಕಟ್ಟಿದ್ದರು. ಹುಬ್ಬಳ್ಳಿ, ದಾವಣಗೆರೆ, ಬೆಳಗಾಂ, ಉಡುಪಿಗಳಿಂದ ಸ್ವಯಂಸೇವಕರ ತಂಡಗಳು ಬಂದವು. ಸಮುದ್ರದ ದಂಡೆಯ ಕಡೆಗೆ 35,000 ಜನರ ಬೃಹತ್ ಮೆರವಣಿಗೆ ಹೊರಟಿತ್ತು. ಹತ್ತು ಮಂದಿ ಆಯ್ದ ಸತ್ಯಾಗ್ರಹಿಗಳು ಸಮುದ್ರದಿಂದ ನೀರನ್ನೂ, ಜೇಡಿಮಣ್ಣನ್ನೂ, ತೆಗೆದುಕೊಂಡು ಬರಬೇಕೆಂದು ತೀರ್ಮಾನಿಸಲಾಗಿತ್ತು. ಹೊನ್ನಾವರದ ಎಂ. ಪಿ. ನಾಡಕರ್ಣಿ ಈ ಸತ್ಯಾಗ್ರಹತಂಡದ ನಾಯಕರು. ಪೂಜಗೇರಿ ಸೇತುವೆಯ ಬಳಿ ಮೆರವಣಿಗೆ ನಿಂತಿತು. ಆಯ್ದ ಸತ್ಯಾಗ್ರಹಿಗಳು ಸಮುದ್ರದ ನೀರನ್ನು ಮೊಗೆದುಕೊಂಡು ಜೇಡಿಮಣ್ಣನ್ನು ತೆಗೆದುಕೊಂಡು ಬಂದರು. ಆ ವೇಳೆಗೆ ಸರಿಯಾಗಿ ಮಂಗಳೂರು ಜಾಥಾದೊಂದಿಗೆ ಕಾರ್ನಾಡ್ ಸದಾಶಿವರಾಯರೂ, ಹುಬ್ಬಳ್ಳಿಯಿಂದ ಡಾ॥ ಹರ್ಡೀಕರ್, ಪಿ. ಬಿ. ಪುರಾಣಿಕ್ ಹಾಗೂ ಉಮಾಬಾಯ್ ಕುಂದಾಪುರ ಅವರುಗಳೂ ಬಂದಿಳಿದರು. ಮೆರವಣಿಗೆ ಅಂಕೋಲೆಗೆ ಮರಳಿತು. ತಾಲ್ಲೂಕು ಕಚೇರಿ ಎದುರು ಮೈದಾನದಲ್ಲಿ ಉಪ್ಪನ್ನು ತಯಾರಿಸಲಾಯಿತು. ಪೋಲೀಸರು ತಟಸ್ಥರಾಗಿ ಎಲ್ಲವನ್ನೂ ವೀಕ್ಷಿಸುತ್ತಿದ್ದರು. ನೆರೆದಿದ್ದ ಜನಸಮುದಾಯ ಶಾಂತಿ, ಶಿಸ್ತುಗಳಿಂದ ಕೂಡಿತ್ತು. ನಾಡಕರ್ಣಿಯವರು ತಯಾರಿಸಿದ ಮೊದಲ ಉಪ್ಪಿನ ಪೊಟ್ಟಣವನ್ನು 30 ರೂಪಾಯಿಗಳಿಗೆ ಕೊಂಡ ಗೌರವ ರೇವು

ಹೊನ್ನಪ್ಪ ನಾಯ್ಕರದಾಯಿತು. ಎರಡನೆಯ ಪೊಟ್ಟಣವನ್ನು ಕಾರ್ವಾರದ ಭುಜಲೆಯವರು ಕೊಂಡರು. ಮೂರನೆಯದನ್ನು ದಾವಣಗೆರೆಯ ಕಾಸಲ ಶ್ರೀನಿವಾಸಶೆಟ್ಟರು ಪಡೆದರು. ಸ್ವಾಮಿ ವಿದ್ಯಾನಂದರು ಸಭೆಯನ್ನುದ್ದೇಶಿಸಿ ಮಾತನಾಡಿದರು.

ಮರುದಿನ ಉಷಃಕಾಲದಲ್ಲಿ ಎಂ. ಪಿ. ನಾಡಕರ್ಣಿ ಮತ್ತು ಸ್ವಾಮಿ ವಿದ್ಯಾನಂದರ ದಸ್ತಗಿರಿ ಆಯಿತು. ನಾಡಕರ್ಣಿ ಅವರಿಗೆ ಆರು ತಿಂಗಳ ಸಶ್ರಮ ಶಿಕ್ಷೆ. ವಿದ್ಯಾನಂದರಿಗೆ ಒಂದು ವರ್ಷದ ಕಠಿಣ ಶಿಕ್ಷೆ ವಿಧಿಸಲಾಯಿತು.

ಅಂದು ಎಲ್. ವಿ. ಕಾಮತರ ನೇತೃತ್ವದಲ್ಲಿ 20 ಸತ್ಯಾಗ್ರಹಿಗಳ ತಂಡ ಸಮುದ್ರದ ನೀರನ್ನು ತಂದು ಊರಿನ ಚೌಕದಲ್ಲಿ ಉಪ್ಪು ತಯಾರ್ಮಾಡಿತು. ಉಪ್ಪನ್ನು ಹರಾಜು ಮಾಡುವಾಗಲೂ ಪೋಲೀಸರು ಮಧ್ಯೆ ಪ್ರವೇಶಿಸಲಿಲ್ಲ. 15ನೇ ತಾರೀಖು ಬೆಳಿಗ್ಗೆ ಸತ್ಯಾಗ್ರಹಿಗಳಿಗೆ ಆಶ್ರಯ ನೀಡಿದ್ದ ಶಾಮರಾವ್ ಕೃಷ್ಣಶೆಣೈ ಅವರ ದಸ್ತಗಿರಿಯಾಯಿತು. ಶೆಣೈರವರ 80 ವರ್ಷದ ವೃದ್ಧಮಾತೆ ಮಗನನ್ನು ಆಶೀರ್ವದಿಸಿ ಸೆರೆಮನೆಗೆ ಕಳಿಸಿಕೊಟ್ಟರು. ಶಾಮರಾವ್ ಶೆಣೈರವರ ಹೆಂಡತಿ ಆರತಿ ಬೆಳಗಿ ಗಂಡನನ್ನು ಬೀಳ್ಕೊಟ್ಟರು.

ಶಾಮರಾವ್ ಶೆಣೈ ಅವರ ಸೋದರಿ ಸೀತಾಬಾಯ್‌ಷರಾಫ್ ಹಾಗೂ ಆನಂದಾಬಾಯಿ ಹನಮಟ್ಟೇಕರ್ ಇವರು 16ರಂದು ಅಂಕೋಲೆಯಲ್ಲಿ ಸಾರ್ವಜನಿಕ ಸಭೆ ಕೂಡಿಸಿ ಮಾತನಾಡಿದರು. ದಿನಕರ ದೇಸಾಯರು ಜನರನ್ನು ಹುರಿದುಂಬಿಸುವ ಕವನಗಳನ್ನು ರಚಿಸಿ ಹಾಡಿದರು. ವಿದ್ಯಾರ್ಥಿ ಸಮೂಹ ಉಪ್ಪು ತಯಾರಿಸಿ ಬಹಿರಂಗ ಹರಾಜಿನಲ್ಲಿ ಮಾರತೊಡಗಿತು. ಗಾಂಧಿ ಅವರು ದಾರ್ಸಾನ ಉಪ್ಪಿನ ಕೋಠಿಯನ್ನು ಮುತ್ತಿಗೆ ಹಾಕಲು ನಿರ್ಧರಿಸಿದ್ದ ದಿನವೇ ಕರ್ನಾಕಟದಲ್ಲೂ ಸಾಣೆಕಟ್ಟೆ ಉಪ್ಪಿನ ಕೋಠಿಯನ್ನು ಮುತ್ತಿಗೆ ಹಾಕಲು ತೀರ್ಮಾನಿಸಲಾಗಿತ್ತು. ಶ್ರೀಧರ ಪಾಂಡುರಂಗ ಬಾಳಿಗ ಅವರ

ನೇತೃತ್ವದಲ್ಲಿ 18 ಮಂದಿ ಸ್ವಯಂ ಸೇವಕರು, ಸಾಣೆಕಟ್ಟೆ ಕೋಠಿಗೆ ನುಗ್ಗಿ ನೂರಾರು ಮಣ ಉಪ್ಪನ್ನು ತೆಗೆದುಕೊಂಡು ಕುಮುಟಾಗೆ ಗಾಡಿಗಳಲ್ಲಿ ಸಾಗಿಸಿದರು. ಅಷ್ಟು ಉಪ್ಪನ್ನೂ 15 ನಿಮಿಷಗಳಲ್ಲಿ ಮಾರಾಟಮಾಡಲಾಯಿತು. ಶಿಸ್ತಿನ ಸ್ವಯಂಸೇವಕರು ಉಪ್ಪನ್ನು ದೋಚುತ್ತಿದ್ದಂತೆ, ಅಸಹಾಯಕ ತೆರಿಗೆ ಅಧಿಕಾರಿಗಳು ಮೂಕಪ್ರೇಕ್ಷಕರಂತೆ ಅದನ್ನು ನೋಡುತ್ತಾ ನಿಂತಿದ್ದರು.

ಅಂಕೋಲಾದಲ್ಲಿ ಆರಂಭವಾದ ಈ ಸತ್ಯಾಗ್ರಹ ಮುಂದೆ ಹಿಚಕಡ, ವಾಸರಕುದುರೆ, ಗುಂಡಮಾಲ, ಬಾಸಗೋಡ್, ಅವಸಾನ, ಭಾವೀಕೇರಿಗಳಿಗೂ ಹರಡಿದವು. ಉಪ್ಪಿನ ಸತ್ಯಾಗ್ರಹ ಮಂಗಳೂರು, ಮಲ್ಪೆ, ಬಿಜಾಪುರ ಜಿಲ್ಲೆಯ ಬಸವಾಳ, ಧಾರ್ವಾಡ ಜಿಲ್ಲೆಯ ಕಿರಸೂರು, ಯಾವಗಲ್‌ಗಳಲ್ಲೂ ನಡೆದವು.

ಅಂಕೋಲಾದಲ್ಲಿ ಉಪ್ಪಿನ ಸತ್ಯಾಗ್ರಹ ಅವ್ಯಾಹತವಾಗಿ 45 ದಿನಗಳು ನಡೆಯಿತು. ಉಪ್ಪಿನ ಸಂತೆಗಳನ್ನು ಏರ್ಪಡಿಸಲಾಯಿತು. ಮೊದಲ ಸಂತೆಗೆ ಕರಾವಳಿಯ ಹಳ್ಳಿಗಳ 35 ಮಂದಿ ಉಪ್ಪು ತಯಾರಕರು, ಕರನೀಡದ ಉಪ್ಪನ್ನು ತಂದು ಮಾರಾಟ ಮಾಡಿದರು. ಸಹಸ್ರಾರು ಜನ ಈ ಉಪ್ಪನ್ನು ಕೊಂಡರು. ಈ ಸತ್ಯಾಗ್ರಹದ ಪರಿಣಾಮವಾಗಿ ಉಪ್ಪಿನಕರ ಹೋಗಿಯೇ ಬಿಟ್ಟಿತೇನೋ ಎಂದು ಜನ ಭಾವಿಸುವಂತಾಯಿತು. ಈ ಸತ್ಯಾಗ್ರಹವನ್ನು ಸಂಘಟಿಸುವ ಕಾರ್ಯದಲ್ಲಿ ತೊಡಗಿದ್ದ ಶ್ರೀ ದಿವಾಕರರು ಏಪ್ರಿಲ್ 16ರಂದು ಧಾರವಾಡದಲ್ಲಿ ಬಂಧಿಸಲ್ಪಟ್ಟರು. ಡಾ॥ ಹರ್ಡೀಕರರು ಅವರ ಕಾರ್ಯವನ್ನು ಮುಂದುವರಿಸಿಕೊಂಡು ಹೋದರು.

ಉಪ್ಪಿನ ಸತ್ಯಾಗ್ರಹವನ್ನು ಕಾಲಕ್ರಮದಲ್ಲಿ ಬಂದುಮಾಡಿ, ಅಸಹಕಾರ ಚಳುವಳಿ, ಅರಣ್ಯ ಸತ್ಯಾಗ್ರಹ, ಕರನಿರಾಕರಣ ಚಳುವಳಿ, ಹೆಂಡದಂಗಡಿಗಳ ಪಿಕೆಟಿಂಗ್ ಮುಂತಾದ ಆಂದೋಳನಗಳನ್ನು ನಡೆಸಲು ಕೆ.ಪಿ.ಸಿ.ಸಿ. ಮೇ 17ನೇ ತಾರೀಖು ಒಂದು ಗೊತ್ತುವಳಿ

ಮಾಡಿ ಜಾಹೀರು ಮಾಡಿತು. ಹುಬ್ಬಳ್ಳಿಯಲ್ಲಿ ನಡೆದ ಈ ಸಭೆಗೆ ಶ್ರೀನಿವಾಸರಾವ್ ಕೌಜಲಗಿ ಅವರು ಅಧ್ಯಕ್ಷರಾಗಿದ್ದರು. ಕೆ. ಎ. ವೆಂಕಟರಾಮಯ್ಯನವರನ್ನು ಈ ಎಲ್ಲಾ ಸತ್ಯಾಗ್ರಹಗಳ ಮುಖ್ಯ ಮೇಲ್ವಿಚಾರಕರನ್ನಾಗಿ ನೇಮಿಸಲು ನಿರ್ಣಯ ಮಾಡಲಾಯಿತು.

ಏಪ್ರಿಲ್ 30ಕ್ಕೆ ಕೊಡಗಿನಲ್ಲಿ ಬೆಳ್ಳಿಯಪ್ಪ, ಕರುಂಬಯ್ಯ ಮತ್ತು ಕೃಷ್ಣಯ್ಯ ಇವರ ನೇತೃತ್ವದಲ್ಲಿ ಸತ್ಯಾಗ್ರಹ ಆರಂಭವಾಯಿತು. ಈ ಮುಖ್ಯರು 20 ಸ್ವಯಂಸೇವಕರೊಡನೆ ಶೇಂದಿ ಅಂಗಡಿ ಪಿಕೆಟಿಂಗ್ ಆರಂಭಿಸಿದರು; ಖಾದಿ ಪ್ರಚಾರವನ್ನೂ ನಡೆಸಿದರು. ಸತ್ಯಾಗ್ರಹ ಚಳುವಳಿ ಬಹು ಸುವ್ಯವಸ್ಥಿತ ರೀತಿಯಲ್ಲಿ ಕರ್ನಾಟಕದಲ್ಲಿ ಆರಂಭವಾಯಿತು. ಕೆ.ಎ. ವೆಂಕಟರಾಮಯ್ಯ ಅವರು ಜೂನ್ ತಿಂಗಳಲ್ಲಿ ಸಿರ್ಸಿಗೆ ಬಂದು ಕಾರ್ಯಕ್ರಮದ ಯೋಜನೆಯನ್ನು ಸಿದ್ಧಗೊಳಿಸಿದರು. ಅಸಿಸ್ಟೆಂಟ್ ಕಲೆಕ್ಟರ್ ಜೋನ್ಸ್ ಅರಣ್ಯ ಕಾನೂನುಗಳನ್ನು ಅತಿಕ್ರಮಿಸಿದವರಿಗೆ ಭಾರಿ ಶಿಕ್ಷೆ ಕೊಡುವುದಾಗಿ ಬೆದರಿಕೆ ಹಾಕಿದರು. ಆಗಸ್ಟ್ 4ನೇ ತಾರೀಖು ಗಂಧದ ಮರಗಳನ್ನು ಸತ್ಯಾಗ್ರಹಿಗಳು ಕಡಿದು, ಗಾಡಿಗಳ ಮೇಲೆ ಹೇರಿಕೊಂಡು, ಕೈಯಲ್ಲಿ ಮರದ ಕೊಂಬೆಗಳನ್ನು ಹಿಡಿದುಕೊಂಡು ಮೆರವಣಿಗೆಯಲ್ಲಿ ಹೊರಟರು. ಕತ್ತರಿಸಿದ ಗಂಧದ ಮರಗಳನ್ನು ಸಿರ್ಸಿಗೆ ತಂದು ಮಾರಿಕಾಂಬಾ ದೇವಾಲಯದ ಮುಂದೆ ಬಹಿರಂಗ ಹರಾಜು ಮಾಡಲಾಯಿತು. ಸುಮಾರು 2,000 ಮಂದಿ ಈ ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. ಸಿರ್ಸಿ ಸಿದ್ದಾಪುರ ತಾಲ್ಲೂಕುಗಳ ಎಲ್ಲ ಗ್ರಾಮಗಳಲ್ಲಿಯೂ ಇದೇ ರೀತಿಯ ಸತ್ಯಾಗ್ರಹಗಳು ಮರುಕಳಿಸಿದವು. ಮುಕ್ಕಾಂಬಿಯ ಶ್ಯಾಂಭಟ್ ಬಿಸಿಲಕೊಪ್ಪ ಅವರು ಅರಣ್ಯ ಸತ್ಯಾಗ್ರಹ ಆಚರಿಸುವುದಾಗಿ ಘೋಷಿಸಿದ್ದರು. ಮುನ್ನೆಚ್ಚರಿಕೆಯ ಕ್ರಮವಾಗಿ ಅವರನ್ನು ಬಂಧಿಸಲಾಯಿತು. ಅವರ ಪತ್ನಿ ಅರಣ್ಯಕ್ಕೆ ಹೋಗಿ ಮರಗಳನ್ನು ಕಡಿದು ಸತ್ಯಾಗ್ರಹ ಆಚರಿಸಿ ಅನಂತರ ಪೋಲಿಸ್ ಠಾಣೆಗೆ ಹೋಗಿ, ತಾವು ಅರಣ್ಯ ಕಾನೂನುಗಳನ್ನು ಉಲ್ಲಂಘಿಸಿರುವುದಾಗಿಯೂ ತಮ್ಮನ್ನು ದಸ್ತಗಿರಿ ಮಾಡಬೇಕೆಂದೂ ಕೋರಿದರು.

1930ರಲ್ಲಿ ಅಖಿಲ ಕರ್ನಾಟಕ ವೀರಶೈವ ಸಮ್ಮೇಳನ ಸಮಾವೇಶಗೊಂಡಿತು.

ಈ ಘಟ್ಟದಲ್ಲಿ ಸಿದ್ದಪ್ಪ ಹೊಸಮನಿ ಮತ್ತು ಮಂಜಪ್ಪ ಹೆಗ್ಡೆ ಇವರು ಸಾರ್ವಜನಿಕ ಮನವಿ ಹೊರಡಿಸಿ, ಜನಸಾಮಾನ್ಯರು ಈ ಅಸಹಕಾರ ಚಳುವಳಿಯಲ್ಲಿ ಭಾಗವಹಿಸಬೇಕೆಂದು ಕಳಕಳಿಯಿಂದ ಪ್ರಾರ್ಥಿಸಿದರು ವೀರನಗೌಡಪಾಟೀಲ್, ತಿ. ರು. ನೆಸ್ವಿ, ಕೆ. ಎಫ್. ಪಾಟೀಲ್, ಎಂ. ಪಿ. ಪಾಟೀಲ್ ಇವರು ಆ ಕೂಡಲೇ ಸತ್ಯಾಗ್ರಹದಲ್ಲಿ ಧುಮುಕಿದರು. ಕಾಂಗ್ರೆಸ್ ಹೋರಾಟಕ್ಕೆ ಸಾವಿರಾರು ಜನ ಶ್ರೀಸಾಮಾನ್ಯರು ಇವರನ್ನು ಹಿಂಬಾಲಿಸಿ ಬಂದರು. ಅಸಹಕಾರ ಚಳುವಳಿ ಕರ್ನಾಟಕದಲ್ಲಿ ಜನತಾ ಆಂದೋಲನದ ಸ್ವರೂಪವನ್ನು ಪಡೆಯಿತು.

ಕಾರವಾರದಲ್ಲಿ ಅರಣ್ಯ ಸತ್ಯಾಗ್ರಹದಲ್ಲಿ ತೊಡಗಿದ್ದ ಒಂದು ದೊಡ್ಡ ಜನಸಮುದಾಯದ ಮೇಲೆ ಪೋಲೀಸರು ಲಾಠಿಚಾರ್ಜ್ ಮಾಡಿದರು. ಈಚಲವನ ಕಡಿಯುವುದು, ಹೆಂಡದಂಗಡಿಗಳ ಪಿಕೆಟಿಂಗ್ ಕರ್ನಾಟಕದ ಎಲ್ಲೆಡೆ ಆಯಿತು. ಮಂಗಳೂರಿನಲ್ಲಿ ಸರ್ಕಾರ ವಿಧಿಸಿದ್ದ ಪ್ರತಿಬಂಧಕಾಜ್ಞೆಯನ್ನು ಬಿ. ಮುಕುಂದರಾವ್ ಅವರ ನೇತೃತ್ವದಲ್ಲಿ ಉಲ್ಲಂಘಿಸಲಾಯಿತು. ಪೋಲೀಸರು ಮೆರವಣಿಗೆಯಲ್ಲಿದ್ದವರನ್ನು ಸದೆಬಡಿದರು. 150 ಸ್ವಯಂಸೇವಕರು ಪ್ರತಿಬಂಧಕಾಜ್ಞೆಯನ್ನು ಮುರಿದು ಸೆರೆಮನೆ ಸೇರಿದರು. ಸಿರ್ಸಿ, ಸಿದ್ಧಾಪುರ, ಮಂಗಳೂರು, ಉಡುಪಿ, ಕಾರ್ಕಳ, ಬೆಳಗಾಂ, ಹೊನ್ನಾವರ, ಕಾರವಾರ, ಹಲ್ಯಾಳ, ಹುಬ್ಬಳ್ಳಿ ಮತ್ತು ಬಳ್ಳಾರಿಗಳಲ್ಲಿ ಸತ್ಯಾಗ್ರಹಿಗಳ ಮೇಲೆ ಲಾಠಿಪ್ರಹಾರ ಮಾಡಲಾಯಿತು. ಸಿರ್ಸಿಯಲ್ಲಿ ನೆರೆದ ಜನಸಮೂಹವನ್ನು ಬಾಯೊನೆಟ್‌ನಿಂದ ತಿವಿಯಲಾಯಿತು.

1928ರಲ್ಲಿ ಗುಜರಾತಿನ ಬಾರ್ಡೋಲಿಯಲ್ಲಿ ಭೂಕಂದಾಯವನ್ನು ಸರ್ಕಾರ ಸಿಕ್ಕಾಪಟ್ಟೆ ಏರಿಸಿತು. ಇದರ ವಿರುದ್ಧ ಕರನಿರಾಕರಣ ಚಳುವಳಿಯೊಂದು ನಡೆಯಿತು. ಇತಿಹಾಸ ಪ್ರಸಿದ್ಧವಾದ

ಈ ಕರನಿರಾಕರಣ ಚಳುವಳಿಯ ನಾಯಕತ್ವವನ್ನು ವಲ್ಲಭಭಾಯ್ ಪಟೇಲರೂ, ಕೆ.ಎಫ್. ನಾರಿಮನ್‌ರೂ ವಹಿಸಿದ್ದರು. ಸ್ಥಿರಸಂಕಲ್ಪ ಮಾಡಿದರೆ ಎಂತಹ ಪ್ರಭುತ್ವವನ್ನಾದರೂ ಅಲ್ಲಾಡಿಸಿಬಿಡಬಲ್ಲರೆಂಬುದಕ್ಕೆ ಬರ್ಡೋಲಿಯ ಈ ಸತ್ಯಾಗ್ರಹ ಪ್ರತ್ಯಕ್ಷ ನಿದರ್ಶನ.

ಬಾರ್ಡೋಲಿ ಸತ್ಯಾಗ್ರಹದಂತಹ ಇದೇ ಮಾದರಿಯಲ್ಲೇ ಕರನಿರಾಕರಣೆಯ ಹೋರಾಟವನ್ನು 1930–34ರ ಅವಧಿಯಲ್ಲಿ ಉತ್ತರ ಕನ್ನಡದ ರೈತರು ಕೈಗೊಂಡು ಯಶಸ್ವೀ ರೀತಿಯಲ್ಲಿ ಅದನ್ನು ನಿರ್ವಹಿಸಿದರು.

ಮಹಾತ್ಮರ ಅಸಹಕಾರ ಚಳುವಳಿಯ ಪರಾಕಾಷ್ಠತೆ ಕರ್ನಾಟಕದಲ್ಲಿ ಕರನಿರಾಕರಣ ಚಳುವಳಿಯಲ್ಲಿ ಪರ್ಯವಸಾನವಾಯಿತು. ಕೆಟ್ಟ ಋತುಮಾನ, ಬೆಳೆಯ ಅಭಾವ ಇವು ಹಿರೇಕೇರೂರು, ಸಿರ್ಸಿ, ಸಿದ್ಧಾಪುರ ರೈತರನ್ನು ಕರನಿರಾಕರಣ ಚಳುವಳಿಗೆ ಪ್ರೇರೇಪಿಸಿದವು. ಹಿರೇಕೇರೂರಿನಲ್ಲಿ ಸರ್ದಾರ್ ವೀರನಗೌಡ ಪಾಟೀಲರು, ಸಿರ್ಸಿ, ಸಿದ್ದಾಪುರದಲ್ಲಿ ದಿವಾಕರ್, ಹುಕ್ಕೇರಿಕರ್ ಮತ್ತು ಕೆ. ಎ. ವೆಂಕಟರಾಮಯ್ಯ ಇವರು ರೈತರ ಪರವಾಗಿ ಸರ್ಕಾರಕ್ಕೆ ಕಂದಾಯ ಮಾಫಿ ಮಾಡಲು ಅರ್ಜಿಗಳನ್ನು ಕೊಟ್ಟರು. ಸರ್ಕಾರ ಅದಕ್ಕೆ ಕಿವಿಗೊಡಲಿಲ್ಲ.

ಸಿರ್ಸಿ, ಸಿದ್ದಾಪುರ ತಾಲ್ಲೂಕುಗಳಲ್ಲಿ ಬಾಕಿ ಇದ್ದ 45,000 ರೂ. ಕಂದಾಯದ ವಸೂಲಿಗಾಗಿ ಉಗ್ರಕ್ರಮಗಳನ್ನು ಕೈಗೊಳ್ಳಲು ಸರ್ಕಾರ ನಿರ್ಧರಿಸಿತು. ಸಿದ್ದಾಪುರದ 80 ಕುಳಗಳ ಮೇಲೂ, ಸಿರಸಿಯ 65 ಕುಳಗಳ ಮೇಲೂ ಕ್ರಮ ಜರುಗಿಸಿದ್ದಲ್ಲದೆ ಅವರ ಆಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳಲಾಯಿತು. ಈ ಪೈಕಿ 7–8 ಆಸ್ತಿಗಳನ್ನು ಹರಾಜು ಮೂಲಕ ಮಾರಾಟ ಮಾಡಲಾಯಿತು. ದನಕರುಗಳು ಪಾತ್ರೆ ಪದಾರ್ಥಗಳು, ಕಾಳುಕಡ್ಡಿ ಎಲ್ಲವನ್ನು ಜಪ್ತಿ ಮಾಡಿ ಹರಾಜಿಗಿಡಲಾಯಿತು. ಜನ ಯಾರೂ ಹರಾಜಿನಲ್ಲಿ ಭಾಗವಹಿಸಲಿಲ್ಲ

ಅಧಿಕಾರಿಗಳೇ ಹರಾಜಿನಲ್ಲಿ ಕೂಗಬೇಕಾಯಿತು. ಹಿರೇಕೇರೂರಿನಲ್ಲೂ ಇದೇ ಕ್ರಮ ಅನುಸರಿಸಲಾಯಿತು. ವೀರನಗೌಡ ಪಾಟೀಲ್, ತಿ.ರು. ನೆಸ್ವಿ, ಹಳ್ಳಿಕೇರಿ ಇವರು ಹಿರೇಕೆರೂರು ಸತ್ಯಾಗ್ರಹವನ್ನು ಯಶಸ್ವಿಗೊಳಿಸಿದ ಮಹನೀಯರು.

ಅಂಕೋಲಾ ತಾಲ್ಲೂಕಿನ ಕಥೆಯೇ ಬೇರೆ. ಆ ತಾಲ್ಲೂಕಿನ ನಾಡವರು ಜನಾಂಗದ ಧೀರಯೋಧರು ಮಾಡಿದ ತ್ಯಾಗ, ಹೂಡಿದ ಹೋರಾಟ ಅದ್ವಿತೀಯವಾದದ್ದು. ತಾಲ್ಲೂಕಿನ 400 ರೈತ ಸಂಸಾರಗಳು ಸರ್ಕಾರಕ್ಕೆ ತಾವು ಸಲ್ಲಿಸಬಹುದಾದ ಕಂದಾಯವನ್ನು ಕೊಡುವುದಿಲ್ಲವೆಂದು ಘೋಷಿಸಿದರು. ಸರ್ವಸ್ವವನ್ನೂ ಕಳೆದುಕೊಂಡರೂ ಕೊನೆಯವರೆಗೂ ಅವರು ಪಟ್ಟುಹಿಡಿದು ಹೋರಾಡಿದರು. ಒಟ್ಟು 900 ಜಮೀನುಗಳನ್ನು ಇಲ್ಲಿ ಮುಟ್ಟುಗೋಲು ಹಾಕಿಕೊಳ್ಳಲಾಯಿತು. 55,000 ರೂ. ಬೆಲೆ ಬಾಳುವಷ್ಟು ಚರ ಆಸ್ತಿಗಳನ್ನೂ, 625 ಎಕರೆ ಜಮೀನಿನಲ್ಲಿ ಬೆಳೆದು ನಿಂತಿದ್ದ ಬೆಳೆಯನ್ನೂ ಸರ್ಕಾರ ವಶಪಡಿಸಿಕೊಂಡಿತು. 1931ರ ಜೂನ್ ಮಧ್ಯಭಾಗದಲ್ಲಿ ಕರಮರಕರ್, ಕೃಷ್ಣಾ ಬಾಯ್ ಪಣಜೀಕರ್, ಭೀಮರಾವ್ ಬೇವೂರ್ ಇವರು ಕರನಿರಾಕರಣ ಚಳುವಳಿಯನ್ನು ಸಂಘಟಿಸಲು ಅಂಕೋಲೆಗೆ ಹೋದರು.

ಕರಮರಕರ್ ಮತ್ತು ಬಾಸುಗೋಡು ರಾಮಾನಾಯ್ಕರು ಸತ್ಯಾಗ್ರಹದ ನಿರ್ದೇಶನ ಮಾಡಿದರು. ಕೃಷ್ಣಾಬಾಯ್ ಪಣಜೀಕರ್, ಭೀಮರಾವ್ ಬೇವೂರ್ ಇವರು ಮೈಸೂರು ಸಂಸ್ಥಾನದಿಂದ ಸತ್ಯಾಗ್ರಹಿಗಳನ್ನು ಜಮಾಯಿಸಿದರು. ಎಂ. ಎನ್. ಜೋಯಿಸ್, ಸುಬ್ಬಮ್ಮ ಜೋಯಿಸ್, ಸೂರ್ಯನಾರಾಯಣ ಪಂಡಿತ್, ಡಾ॥ ಪಾರ್ಥನಾರಾಯಣ ಪಂಡಿತ್, ಗೌರಮ್ಮ ವೆಂಕಟರಾಮಯ್ಯ, ಎ. ಎಸ್. ನಾರಾಯಣರಾವ್, ಮಾರ್ತಾಂಡ್, ಕೆ. ದೇವಯ್ಯ, ರಾಮಸ್ವಾಮಿ ಮೊದಲಾಗಿ ಮೈಸೂರು ಸಂಸ್ಥಾನದಿಂದ 300ಕ್ಕೂ ಹೆಚ್ಚು ಮಂದಿ ಸತ್ಯಾಗ್ರಹಿಗಳು ಈ ಚಳುವಳಿಯಲ್ಲಿ ಭಾಗವಹಿಸಿದರು.

ಒಟ್ಟು 13 ಶಿಬಿರಗಳನ್ನು ತೆರೆಯಲಾಯ್ತು. ಇವುಗಳ ಪೈಕಿ ಅನೇಕ ಶಿವಮೊಗ್ಗ ಜಿಲ್ಲೆಯ ಅಂಚಿನ ಹಳ್ಳಿಗಳಲ್ಲಿದ್ದವು. ಈ ಚಳುವಳಿಯ ಮಾರ್ಗದರ್ಶನಕ್ಕೆ 30 ಮಂದಿ ಹೊರಗಿನವರು, 40 ಜನ ಸ್ಥಳೀಯ ನಾಯಕರು ನಿಂತರು. ಶಿಬಿರಗಳ ಮೇಲ್ವಿಚಾರಣೆ, ಬಾಸ್‌ಗೋಡ್ ರಾಮಾನಾಯ್ಕ, ಸುಬ್ಬರಾವ್ ನಾಡಕರ್ಣಿ, ಭಾವಿಕೆರೆ ರಾಮಾನಾಯ್ಕ ಇವರದಾಗಿತ್ತು. ಹಳ್ಳಿಗರ ಐಕ್ಯತೆ ಅಸಾಧಾರಣ ರೀತಿಯದಿತ್ತು. ದಿವಾಕರ್, ಬಿ.ಎನ್. ದಾತಾರ್, ನಾರಾಯಣ ರಾವ್ ಜೋಷಿ ಇವರು ಎಲ್ಲಾ ಗ್ರಾಮಗಳ ಸಂದರ್ಶನ ಮಾಡಿ, ಜನರನ್ನು ಹುರಿದುಂಬಿಸಿದರು.

ಕಂದಾಯ ಕೊಡದವರ ಮನೆಗೆ ನುಗ್ಗಿ ಪಾತ್ರೆ ಪದಾರ್ಥಗಳನ್ನು ಜಪ್ತುಮಾಡಿ ಅವುಗಳನ್ನು ಹರಾಜಿಗಿಡಲಾಗುತ್ತಿತ್ತು. ಹರಾಜಿನಲ್ಲಿ ಕೊಳ್ಳುವವರಿರುತ್ತಿರಲಿಲ್ಲ. ಗ್ರಾಮಗಳ ಜನತೆಯಲ್ಲಿ ಅಂತಹ ಒಗ್ಗಟ್ಟು, ಮೈತ್ರಿ ಇತ್ತು ಹಾಗೂ ಯಾರಾದರೂ ಅಪ್ಪಿತಪ್ಪಿ ಕೊಂಡಲ್ಲಿ, ಅವರ ಮನೆಯ ಮುಂದೆ ಹೆಣ್ಣು ಮಕ್ಕಳು ಉಪವಾಸ ಸತ್ಯಾಗ್ರಹ ನಡೆಸುತ್ತಿದ್ದರು. ಈ ಸತ್ಯಾಗ್ರಹಿಗಳ ಮೇಲೆ ಹೆಂಡವನ್ನು ಸುರಿಯಲಾಗುತ್ತಿತ್ತು. ಅವಾಚ್ಯ ಶಬ್ದಗಳಿಂದ ಬಯ್ಯಲಾಗುತ್ತಿತ್ತು. ಅದಾವುದಕ್ಕೂ ಈ ಧೀರ ಮಹಿಳೆಯವರು ಜಗ್ಗುತ್ತಿರಲಿಲ್ಲ. ಶೀಲಭಂಗವಾಗುವ ಸಂದರ್ಭ ಒದಗಿದರೆ, ಪ್ರತೀಕಾರಕ್ಕೂ, ಪ್ರಾಣಾರ್ಪಣೆಗೂ ಅವರು ತಯಾರಿದ್ದರು. ಸ್ವತ್ತುಗಳನ್ನು ಹರಾಜಿನಲ್ಲಿ ಕೊಂಡವರು, ವಾರಸುದಾರರಿಗೆ ತಾವು ಕೊಂಡ ಎಮ್ಮೆ ಹಸುಗಳನ್ನಾಗಲಿ, ಪಾತ್ರೆ ಪದಾರ್ಥಗಳನ್ನಾಗಲೀ ಹಿಂತಿರುಗಿಸುವವರೆಗೂ ಅವರುಗಳ ಮನೆ ಮುಂದೆ ಸತ್ಯಾಗ್ರಹ ಮುಂದುವರಿಯುತ್ತಿತ್ತು. ಅನೇಕ ಮನೆಗಳ ಹಿರಿಯರು ಜೈಲು ಸೇರಿದ್ದರಿಂದ ಅವರ ಮಕ್ಕಳು ಬೀದಿಪಾಲಾದ ನಿದರ್ಶನಗಳೂ ಉಂಟು. ಇಂಥ ಮಕ್ಕಳಿಗಾಗಿಯೇ ಶಿವಮೊಗ್ಗದಲ್ಲಿ ಮತ್ತು ಕಾರವಾರದಲ್ಲಿ ಬಾಲಕಾಶ್ರಮಗಳನ್ನು ತೆರೆಯಬೇಕಾಗಿ ಬಂತು. ಈ ಎರಡೂ ಆಶ್ರಮಗಳಲ್ಲಿ ಒಟ್ಟು 300 ಮಕ್ಕಳು ಇದ್ದವು. ಕಡವೆ

ರಾಮಕೃಷ್ಣ ಹೆಗ್ಡೆ, ಬಿಸಲ್‌ಕೊಪ್ಪದ ಗಣಪತಿಭಟ್, ಸುಗಾವೆಯ ಕೃಷ್ಣಭಟ್ ಮುಂಡಗಸರದ ರಾಮಕೃಷ್ಣಹೆಗಡೆ ಮತ್ತು ಪರಮಯ್ಯ ಗಣಪಯ್ಯ ಹೆಗ್ಡೆ ಇವರು ಶಿರಸಿ ತಾಲ್ಲೂಕಿನಲ್ಲೂ, ದೊಡ್ಮನೆ ನಾಗೇಶ ಗಣೇಶ ಹೆಗ್ಡೆ, ಕನ್ನಳ್ಳಿಯ ಶಿವರಾಮಹೆಗ್ಡೆ, ಶಿರಾಳಿಯ ಸುಬ್ರಾಯಭಟ್ ಬಾಲಂಭಟ್, ಹೊಸಕೊಪ್ಪದ ಗಣೇಶ್‌ಭಟ್, ಕೋಲ್ಲಾರ್ ರಾಮಪ್ಪ ಹೆಗ್ಡೆ, ಕೆಳಗಿನ ಮನೆ ನಾಗೇಶ ಗಣಪಯ್ಯ ಹೆಗ್ಡೆ, ಹೂವಿನಮನೆ ತಿಮ್ಮಣ್ಣ ಮಂಜಯ್ಯ ಹೆಗಡೆ ಇವರೇ ಮುಂತಾದವರು ಸಿದ್ದಾಪುರ ತಾಲ್ಲೂಕಿನಲ್ಲೂ ನಡೆದ ಸತ್ಯಾಗ್ರಹದ ಯಶಸ್ಸಿಗೆ ಕಾರಣರು.

ಅಂಕೋಲಾ ತಾಲ್ಲೂಕಿನ ಚಳುವಳಿಗೆ ಬಾಸಗೋಡ್ ರಾಮಾನಾಯ್ಕ, ಬೋಳೆಯ ಬೊಮ್ಮಯ್ಯನಾಯ್ಕ, ಶೇಟ್ಗೇರಿಯ ಜೋಗಿನಾಯ್ಕ, ಹಿಚಗಡದ ಬೀರಣ್ಣನಾಯ್ಕ, ವಾಸರೆಯ ಸುಬ್ರಾಯನಾಯ್ಕ, ಸೂರ್ತಿ ಬೊಮ್ಮಯ್ಯ ನಾಯ್ಕ ಇವರು ಬಹುಮುಖ್ಯ ಕಾರಣರು.

ಸತ್ಯಾಗ್ರಹದಲ್ಲಿ ಭಾಗವಹಿಸಿದ ಹೆಣ್ಣುಮಕ್ಕಳು ಪಟ್ಟ ಪಾಡು, ಎದುರಿಸಿದ ಸವಾಲುಗಳು ಕಣ್ಣಲ್ಲಿ ನೀರು ಮಿಡಿಸುವಂಥವು. ವೆಂಕಟರಾಮಯ್ಯನವರ ಹೆಂಡತಿ ಗೌರಮ್ಮ, ಕಲ್ಹಾಳದ ಕಾವೇರಮ್ಮ, ಗೋದಾವರಿಬಾಯ್, ಎರಡು ದಿನದ ಮಗುವಿನ ತಾಯಿ ಸೀತಾಬಾಯ್ ಮಡಗಾಂವಕರ್, ಸಿರ್ಸಿಯ ಸೀತಾಬಾಯ್, ಹಣಬೆ ಬೈಲ್ ದುಗ್ಗಮ್ಮ, ಮುಗುದೂರ್ ಸುಬ್ಬಮ್ಮ, ಕನ್ನಳ್ಳಿ ಸೀತಾಬಾಯ್, ತೀರಳಿಗಿ ಗಂಗಾಬಾಯ್, ಪಾರ್ವತಿಬಾಯ್, ಇಡಕಲಗದ್ದೆ ತಿಮ್ಮಮ್ಮ, ಗುಂಜಗೋಡ್ ಮಹದೇವಮ್ಮ (ಮಹದೇವಿ ತಾಯಿ), ಹರಿಗೆ ಸರಸ್ವತಮ್ಮ ಮುಂತಾದ ಅನೇಕ ಮಹಿಳಾ ಸತ್ಯಾಗ್ರಹಿಗಳ ಅಗ್ನಿಪರೀಕ್ಷೆಯೇ ಈ ಹೋರಾಟದಲ್ಲಿ ನಡೆದುಹೋಯಿತು.

ಒಟ್ಟಿನಲ್ಲಿ 1931ರ ಸತ್ಯಾಗ್ರಹ, ಅಸಹಕಾರ ಚಳುವಳಿಗಳಲ್ಲಿ ಕರ್ನಾಟಕದಲ್ಲಿ ಜೈಲು ಕಂಡವರು, ಬೆಳಗಾವಿ ಜಿಲ್ಲೆ 664, ಉತ್ತರ

ಕನ್ನಡಜಿಲ್ಲೆ 442, ಧಾರವಾಡ 203, ದಕ್ಷಿಣ ಕನ್ನಡ 159, ಬಿಜಾಪುರ 158, ಕೊಡಗು 20 ಮಂದಿ.

1921ರ ಚಳುವಳಿಯಲ್ಲಿ ಇಡೀ ಭಾರತದಲ್ಲಿ ಜೈಲು ಕಂಡವರು 30 ಸಾವಿರ ಮಂದಿ. 30–31ರಲ್ಲಿ ಅದು 90 ಸಾವಿರಕ್ಕೆ ಏರಿತು. ಇವಕ್ಕೆ ಮೂರು ನಾಲ್ಕು ಪಟ್ಟು ಜನ ಲಾಠಿ ಪ್ರಹಾರಕ್ಕೆ ಗುರಿಯಾದರು.

ಗಾಂಧೀಜಿ ಹಾಗೂ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸದಸ್ಯರೆಲ್ಲರ ಬಿಡುಗಡೆಯಾಯಿತು. ಮಾರ್ಚಿ 1931ರಲ್ಲಿ ಗಾಂಧಿ–ಇರ್ವಿನ್ ಒಪ್ಪಂದಕ್ಕೆ ಸಹಿಬಿತ್ತು. ಇದಾದ ಕೂಡಲೇ ಭಾರತಾದ್ಯಂತ ಜೈಲುಗಳಲ್ಲಿದ್ದ ರಾಜಕೀಯ ಖೈದಿಗಳನ್ನು ಬಿಡುಗಡೆ ಮಾಡಲಾಯಿತು. ವೈಸರಾಯರು ಗಾಂಧೀಜಿಯವರೊಡನೆ ಸಮಾಲೋಚನೆ ನಡೆಸಿ, ಸತ್ಯಾಗ್ರಹವನ್ನು ಹಿಂತೆಗೆದುಕೊಳ್ಳಬೇಕೆಂದೂ, ಭಾರತಕ್ಕೆ ಸ್ವಾತಂತ್ರ್ಯ ನೀಡುವ ಬಗ್ಗೆ ಮುಂದಿನ ಮಾತುಕತೆಗಳನ್ನು ಮುಂದುವರೆಸಲು ಲಂಡನ್ನಿನಲ್ಲಿ ಚಕ್ರಗೋಷ್ಠಿಯನ್ನು ಕರೆಯಲಾಗುವುದೆಂದೂ ಭರವಸೆ ನೀಡಿದರು. ಈ ಒಪ್ಪಂದದಂತೆ ಗಾಂಧೀಜಿ ಕಾಯಿದೆಭಂಗ ಚಳುವಳಿಯನ್ನು ಹಿಂದಕ್ಕೆ ತೆಗೆದುಕೊಂಡರು. ಈ ವೇಳೆಗೆ ಲೇಬರ್ ಪಾರ್ಟಿ ಇಂಗ್ಲೆಂಡಿನಲ್ಲಿ ಅಧಿಕಾರಕ್ಕೆ ಬಂದಿತು. ನಿರಂಕುಶಾಧಿಕಾರ ಕೊನೆಗೊಳ್ಳಬೇಕೆಂದು ಲೇಬರ್‌ಪಾರ್ಟಿ ವಿರೋಧ ಪಕ್ಷವಾಗಿದ್ದಾಗ, ಗುಡುಗುತ್ತಿದ್ದ ರ್‍ಯಾಮ್ಸೆ ಮ್ಯಾಕ್ಡೊನಾಲ್ಡ್ ಬ್ರಿಟನ್ನಿನ ಪ್ರಧಾನಿಯಾದರು. ಚಕ್ರಗೋಷ್ಠಿಗೆ ಗಾಂಧಿಯವರು ಲಂಡನ್‌ಗೆ ಪ್ರಯಾಣ ಮಾಡಿದರು. ಹರಿಜನರಿಗೆ ಪ್ರತ್ಯೇಕ ಮತದಾನದ ಹಕ್ಕನ್ನು ನೀಡುವುದಾಗಿ ಬ್ರಿಟಿಷ್ ಪ್ರಧಾನಿ ಘೋಷಣೆ ಮಾಡಿದರು. ಇದರಿಂದ ಗಾಂಧಿಯವರಿಗೆ ತುಂಬ ಬೇಸರವಾಯಿತು. ಗಾಂಧೀಜಿ ಖಿನ್ನರಾಗಿ ಭಾರತಕ್ಕೆ ಹಿಂದಿರುಗಿದರು. ವೈಸರಾಯ್ ಲಾರ್ಡ್ ಇರ್ವಿನ್ನಿರ ಸ್ಥಾನದಲ್ಲಿ ಆ ವೇಳೆಗೆ ಲಾರ್ಡ್ ವಿಲ್ಲಿಂಗ್ಡನ್ ನೇಮಕವಾಗಿದ್ದರು. ಗಾಂಧೀಜಿ ವೈಸರಾಯರನ್ನು ಭೇಟಿಮಾಡಲು ಬಯಸಿ 1931ನೇ ಡಿಸೆಂಬರ್ 29ನೇ ತಾರೀಖು ಪತ್ರ ಬರೆದರು. ಭೇಟಿ ಕೈಗೂಡಲಿಲ್ಲ.

1932ನೇ ಜನವರಿ 1ನೇ ತಾರೀಖು ಅಖಿಲ ಭಾರತ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ಸೇರಿ ಮತ್ತೆ ಕಾಯಿದೆಭಂಗ ಚಳುವಳಿಯನ್ನು ಆರಂಭಿಸುವ ನಿರ್ಣಯ ಮಾಡಿತು. ಜನವರಿ 4ನೇ ತಾರೀಖು ಗಾಂಧೀಜಿ ಅವರನ್ನೂ, ವಲ್ಲಭಭಾಯಿ ಅವರನ್ನೂ ದಸ್ತಗಿರಿ ಮಾಡಲಾಯಿತು.

ಕಾಂಗ್ರೆಸ್ ಕಾರ್ಯ ಸಮಿತಿಯ ಸದಸ್ಯರನ್ನೆಲ್ಲ ಒಬ್ಬೊಬ್ಬರನ್ನಾಗಿ ದಸ್ತಗಿರಿ ಮಾಡಿ ಕಾಂಗ್ರೆಸ್ ಸಂಸ್ಥೆಯನ್ನು ನ್ಯಾಯಬಾಹಿರ ಸಂಸ್ಥೆಯೆಂದು ಘೋಷಿಸಲಾಯಿತು. ಚಳುವಳಿಗೆ ಬೆಂಬಲವಿತ್ತು ಪ್ರಚಾರ ಮಾಡುತ್ತಿದ್ದ ಧಾರವಾಡದ ಕರ್ಮವೀರ, ಬಳ್ಳಾರಿಯ ಕರ್ನಾಟಕ ಕೇಸರಿ, ಬೆಳಗಾಂವಿಯ ಸಂಯುಕ್ತ ಕರ್ನಾಟಕ, ಹುಬ್ಬಳ್ಳಿಯ ತರುಣಕರ್ನಾಟಕ, ಬಿಜಾಪುರದ 'ಉದಯ' ಮತ್ತು 'ಕರ್ನಾಟಕ ವೈಭವ' ಪತ್ರಿಕೆಗಳ ಮಾಲೀಕರು ಠೇವಣಿ ನೀಡಬೇಕೆಂದು ಆಜ್ಞೆಮಾಡಲಾಯಿತು. ಠೇವಣಿ ಕೊಡಲು ನಿರಾಕರಿಸಿ, ಆ ಪತ್ರಿಕೆಗಳ ಪ್ರಕಟಣೆಯನ್ನೇ ಪತ್ರಿಕಾಮಾಲೀಕರು ನಿಲ್ಲಿಸಿದರು. ಈ ಪತ್ರಿಕೆಗಳ ಬದಲು ದೇಶದ ನಾನಾ ಭಾಗಗಳಿಂದ ಸತ್ಯಾಗ್ರಹ ಸಮಾಚಾರವನ್ನು ಹೊತ್ತ ನೂರಾರು ಕಲ್ಲಚ್ಚಿನ ಕರಪತ್ರಗಳು ಹೊರಬೀಳಲಾರಂಭವಾದವು. ಮಂಗಳೂರು, ಉಡುಪಿ, ಕಾಸರಗೋಡು, ಕೊಟ್ಟೂರು, ಗದಗ್, ಹುಬ್ಬಳ್ಳಿ, ಹಾವೇರಿಗಳಲ್ಲಿ ಪೋಲೀಸರು ಲಾಠೀಪ್ರಹಾರ ಮಾಡಿದರು. ಮಂಗಳೂರು ಜಿಲ್ಲೆಯಲ್ಲಿ ಸ್ತ್ರೀಪುರುಷರೆನ್ನದೆ ಎಲ್ಲರಮೇಲೂ ಪೋಲೀಸರು ಅಮಾನುಷ ರೀತಿಯಲ್ಲಿ ವರ್ತಿಸಿದರು. ಪ್ರತಿಬಂಧಕಾಜ್ಞೆ ಇದ್ದಾಗ್ಯೂ ಬಾಗಲಕೋಟೆಯಲ್ಲಿ ಒಂದು ಇತಿಹಾಸ ಪ್ರಸಿದ್ಧವಾದ ಅಖಿಲ ಕರ್ನಾಟಕ ರಾಜಕೀಯ ಸಮ್ಮೇಳನ ನಡೆಯಿತು. ಹ.ರಾ. ಪುರೋಹಿತರು ಈ ಸಂದರ್ಭದಲ್ಲಿ ದಸ್ತಗಿರಿಯಾದರು. ಇದೇ ರೀತಿ ಜೂನ್ ತಿಂಗಳಲ್ಲಿ ಮಂಗಳೂರಿನಲ್ಲಿ ಖಂಡಿಗೆ ಕೃಷ್ಣಭಟ್ಟರು ಒಂದು ರಾಜಕೀಯ ಪರಿಷತ್ತನ್ನು ಕೂಡಿಸಿದರು. ಕೃಷ್ಣಭಟ್ಟರಾದಿಯಾಗಿ ನೂರಾರು ಕಾರ್ಯಕರ್ತರ ಬಂಧನವಾಯಿತು. ಹೀಗೆ ಕಾಯಿದೆಭಂಗ

ಚಳುವಳಿ 1934ರವರೆಗೆ ತೀವ್ರಗತಿಯಲ್ಲೇ ನಡೆಯಿತು. 1934ರಲ್ಲಿ ಸರ್ಕಾರ ಕಾಂಗ್ರೆಸ್ ಸಂಸ್ಥೆಯ ಮೇಲಿನ ಪ್ರತಿಬಂಧಕಗಳನ್ನು ತೆಗೆದುಹಾಕಿತಾದರೂ, ಹಿಂದೂಸ್ಥಾನಿ ಸೇವಾದಳದ ಮೇಲಿನ ಪ್ರತಿಬಂಧಕಾಜ್ಞೆಯನ್ನು 1937ರವರೆಗೆ ಹಿಂತೆಗೆದುಕೊಳ್ಳಲಿಲ್ಲ. ಹೀಗಾಗಿ ಈ ಅವಧಿಯಲ್ಲಿ ಸತ್ಯಾಗ್ರಹಕ್ಕೆ ಸೇವಾದಳ ಕಾರ್ಯಕರ್ತರ ಸಂಘಟನೆಯನ್ನು ಅವರು ಗುಪ್ತವಾಗಿಯೇ ಕೈಗೊಳ್ಳಬೇಕಾಯಿತು.

ಕೇವಲ ರಚನಾತ್ಮಕ ಕಾರ್ಯಗಳಲ್ಲೇ ತೊಡಗಿದ್ದ ಮೈಸೂರು ಸಂಸ್ಥಾನದ ಕಾಂಗ್ರೆಸ್ ಪ್ರತಿನಿಧಿಗಳು 1928ನೇ ವರ್ಷದಲ್ಲಿ ಸಮಾವೇಶಗೊಂಡು 'ಮೈಸೂರು ಸ್ಟೇಟ್' ಕಾಂಗ್ರೆಸ್ ಎಂಬ ರಾಜಕೀಯ ಸಂಸ್ಥೆಯನ್ನು ಸ್ಥಾಪಿಸಿ ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರ ಪಡೆಯುವುದಕ್ಕಾಗಿ ಚಳುವಳಿ ಹೂಡಲು ನಿರ್ಧರಿಸಿದರು. ಈ ದಿಟ್ಟ ಹೆಜ್ಜೆ ಇಡಲು ಸ್ಫೂರ್ತಿ ಕೊಟ್ಟವರು ಮೈಸೂರಿನ ಎಂ. ವೆಂಕಟಕೃಷ್ಣಯ್ಯ ಅವರು, ಮದ್ರಾಸಿನ ಸುಪ್ರಸಿದ್ಧ ಕಾಂಗ್ರೆಸ್ ಮುಖಂಡರೂ, ಉಜ್ವಲವಾಗ್ಮಿಗಳೂ ಆಗಿದ್ದ ಎಸ್. ಸತ್ಯಮೂರ್ತಿ ಅವರು ಇದರ ಉದ್ಘಾಟನೆ ಮಾಡಿದರು. ಎರಡನೆಯ ಅಧಿವೇಶನವನ್ನು ಮುಂದಿನ ವರ್ಷ ಅಖಿಲ ಭಾರತ ಕಾಂಗ್ರೆಸ್ಸಿನ ಅಧ್ಯಕ್ಷ ಸೇಲಂನ ವಿಜಯ ರಾಘವಾಚಾರ್ಯರು ಉದ್ಘಾಟಿಸಿದರು. ಆ ಸಂದರ್ಭದಲ್ಲಿ ಸ್ಟೇಟ್ ಕಾಂಗ್ರೆಸ್ ಅಧ್ಯಕ್ಷ ವೆಂಕಟಕೃಷ್ಣಯ್ಯ ಅವರು ಮಾಡಿದ ಭಾಷಣದಲ್ಲಿ ಕಾಂಗ್ರೆಸ್ಸಿನ ಸ್ಥಾಪನೆ ಮತ್ತು ಗುರಿಯ ಚಿತ್ರವನ್ನು ಜನತೆಯ ಮುಂದಿಟ್ಟರು. ನಿರಂಕುಶಾಧಿಕಾರಿಗಳ ನ್ಯೂನಾತಿರೇಕಗಳನ್ನು ಸರಿಪಡಿಸಿ, ಪ್ರಜೆಗಳಿಗೆ ಸರ್ಕಾರದ ವಿಚಾರಕ್ಕೆ ಗೌರವಾದರಗಳನ್ನುಂಟು ಮಾಡುವುದೇ ಕಾಂಗ್ರೆಸ್ಸಿನ ಸ್ಥಾಪನೆಯ ಉದ್ದೇಶ. ಬ್ರಿಟಿಷ್ ಇಂಡಿಯಾದಲ್ಲಿ, ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಹೇಗೋ ಹಾಗೇ ಮೈಸೂರು ಸ್ಟೇಟ್ ಕಾಂಗ್ರೆಸ್ಸೂ ಕಾರ್ಯಾಚರಣೆ ಮಾಡುವುದು. ಸರ್ಕಾರಕ್ಕೆ ಕಾಂಗ್ರೆಸ್ ಪ್ರತಿಪಕ್ಷವಲ್ಲ. ಆದ್ದರಿಂದ ಶ್ರೀಮನ್ಮಹಾರಾಜರೂ, ಅವರ ಸರ್ಕಾರದವರೂ ಕಾಂಗ್ರೆಸ್ ಸಂಸ್ಥೆ ಬೆಳೆಯಲು

ಅವಕಾಶ ನೀಡಿ, ಈ ರಾಜ್ಯ ಧರ್ಮರಾಜ್ಯ, ರಾಮರಾಜ್ಯವಾಗಲು ನೆರವಾಗಬೇಕೆಂದು ಅವರು ಮನವಿ ಮಾಡಿಕೊಂಡರು.

ಅದೇ ವರ್ಷ ಸಂಸ್ಥಾನದಲ್ಲಿ ಬ್ರಾಹ್ಮಣೇತರ ಸಮ್ಮೇಳನವೊಂದು ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಅಧ್ಯಕ್ಷತೆಯಲ್ಲಿ ನಡೆದು, ಇನ್ನು ಮುಂದೆ ಜವಾಬ್ದಾರಿ ಸರ್ಕಾರದ ಸ್ಥಾಪನೆ ಪ್ರಜಾ ಮಿತ್ರಮಂಡಳಿಯ ಗುರಿಯೆಂದು ಆ ಸಮ್ಮೇಳನ ಘೋಷಣೆ ಮಾಡಿತು. ಆದರೆ ಈ ಪ್ರಜಾಮಿತ್ರ ಮಂಡಳಿಯ ಕಾರ್ಯಕ್ರಮಗಳು ಚುರುಕಾಗಿಲ್ಲವೆಂಬ ಕಾರಣದ ಮೇಲೆ 1930ರಲ್ಲಿ ಈ ಸಂಸ್ಥೆಯ ಬಹುಮಂದಿ ಸದಸ್ಯರು ಈ ಸಂಸ್ಥೆಯನ್ನು ಬಿಟ್ಟು 'ಪ್ರಜಾಪಕ್ಷ' ಎಂಬ ಇನ್ನೊಂದು ಸಂಸ್ಥೆಯನ್ನು ಸ್ಥಾಪಿಸಿದರು.

ಸರ್ಕಾರವಾದರೋ ಜನತೆಯಲ್ಲಿ ರಾಜಕೀಯಪ್ರಜ್ಞೆ ದಿನೇ ದಿನೇ ಬೆಳೆಯುತ್ತಿರುವುದನ್ನು ಉಪೇಕ್ಷಿಸಿ ರಾಜಕೀಯ ನಾಯಕರನ್ನು ಸದೆಬಡಿಯಲು, ಹೊಗಳುಭಟ್ಟರಿಗೆ ಪ್ರೋತ್ಸಾಹ ನೀಡಲು ತೊಡಗಿತು. ಆಡಳಿತದಲ್ಲಿ ಲೋಪದೋಷಗಳು ಹೆಚ್ಚುತ್ತಾ ಹೋಯಿತು. ಸರ್ಕಾರದ ಉನ್ನತ ಹುದ್ದೆಗಳಿಗೆ ಐರೋಪ್ಯರನ್ನೇ ನೇಮಕ ಮಾಡಲಾಯಿತು. ಪೊಲೀಸ್ ಐ.ಜಿ. ಮುಖ್ಯ ಇಂಜಿನೀಯರ್, ವಿದ್ಯಾ ಇಲಾಖೆಯ ಡೈರೆಕ್ಟರ್, ಶ್ರೇಷ್ಠ ನ್ಯಾಯಾಧೀಶರು, ವೈದ್ಯಕೀಯ ಇಲಾಖೆಯ ಸೀನಿಯರ್ ಸರ್ಜನ್, ವಿಶ್ವವಿದ್ಯಾನಿಲಯದ ಉಪಕುಲಪತಿ ಎಲ್ಲರೂ ಐರೋಪ್ಯರೇ ಆದರು.

ಅಲ್ಲದೆ ಪ್ರಜಾಪ್ರತಿನಿಧಿ ಸಭೆಯ ಅಭಿಪ್ರಾಯವನ್ನು ಪಡೆಯದೆ, ಕೋಲಾರ ಚಿನ್ನದ ಗಣಿಗಳ ಗುತ್ತಿಗೆಯನ್ನು ಸರ್ಕಾರ 30 ವರ್ಷಗಳ ಕಾಲಕ್ಕೆ ಐರೋಪ್ಯ ಕಂಪನಿಯೊಂದಕ್ಕೆ ಬರೆದುಕೊಟ್ಟಿತು. ಸಂಸ್ಥಾನದ ಸರ್ಕಾರಿ ಖಜಾನೆಯ ಆಪದ್ಧನ ಕರಗುತ್ತಾ ಬಂತು. ಸಾರ್ವಜನಿಕ ಸಾಲ ಕೋಟ್ಯಂತರ ರೂಪಾಯಿಗಳಿಗೆ ಏರಿತು. ದಿವಾನರು ಅವಕಾಶ ನೀಡುವ ವಿಷಯಗಳ ಬಗ್ಗೆ ಮಾತ್ರ ಶಾಸನ ಸಭೆಯಲ್ಲಿ ಚರ್ಚೆ

ನಡೆಸಬಹುದಾಗಿತ್ತು. ಇತರ ವಿಷಯಗಳಲ್ಲಿ ಸಲಹೆ ನೀಡಲೂ ಶಾಸಕರಿಗೆ ಅವಕಾಶವಿಲ್ಲವಾಯಿತು. ರಾಜಕೀಯ ಪಕ್ಷಗಳು ಇದರಿಂದ ಸರ್ಕಾರದ ವಿರುದ್ಧ ನಿಲ್ಲುವಂತಾಯಿತು.

1932ರ ಚಕ್ರಗೋಷ್ಠಿ ಸಭೆಗೆ ಹೋಗಿಬಂದ ನಂತರ ದಿವಾನ್ ಮಿರ್ಜಾರವರು 1934ರ ಜೂನ್‌ನಲ್ಲಿ ಸೇರಿದ್ದ ಪ್ರಜಾಪ್ರತಿನಿಧಿ ಸಭೆಯ ಅಧಿವೇಶನದಲ್ಲಿ ಪ್ರಜಾಪ್ರಭುತ್ವ ಪದ್ಧತಿಯನ್ನು ಅಲ್ಲಗಳೆದು ಮಾತನಾಡಿದರು. ಪಾಶ್ಚಾತ್ಯ ರಾಷ್ಟ್ರಗಳಲ್ಲೇ ಪ್ರಜಾಪ್ರಭುತ್ವ ಕೊನೆಗೊಳ್ಳುತ್ತಿರುವಾಗ ಮೈಸೂರಿನಲ್ಲಿ ಪ್ರಜಾಪ್ರಭುತ್ವ ಪದ್ಧತಿಯ ಆಡಳಿತ ಜಾರಿಗೆ ತರಬೇಕೆಂದು ಬಯಸುವುದು ಮೂಢತನವೆಂದೂ, ಈ ರೀತಿಯ ರಾಜಕೀಯ ಬದಲಾವಣೆ ತರಲು ಕಾರಣವಾಗಲಿ, ಅವಕಾಶವಾಗಲಿ ಇಲ್ಲವೆಂದೂ ಸ್ಪಷ್ಟಪಡಿಸಿದರು. ದಿವಾನರ ಈ ವಾದಸರಣಿ ಆಡಳಿತ ಸುಧಾರಣೆ ಬಯಸುತ್ತಿದ್ದವರಿಗೆಲ್ಲಾ ತುಂಬಾ ನಿರಾಸೆ ಉಂಟುಮಾಡಿತು. ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ರೈತ ಸಂಘಟನೆಗೆ ಶಾಸಕರು ತೊಡಗಿದರು. ಈ ಕಾರ್ಯದಲ್ಲಿ ಸರ್ಕಾರ ಅಡಚಣೆಗಳನ್ನು ತಂದೊಡ್ಡಿತು. 'ಪ್ರಜಾ ಮಿತ್ರ ಮಂಡಲಿ', 'ಪ್ರಜಾಪಕ್ಷ'ಗಳ ಸದಸ್ಯರು ಮತ್ತೆ ಒಂದುಗೂಡಿ 'ಸಂಯುಕ್ತ ಪ್ರಜಾಪಕ್ಷ' ಎಂಬ ಪ್ರಬಲ ರಾಜಕೀಯ ಪಕ್ಷವೊಂದನ್ನು ಸಂಘಟಿಸಿದರು.

ದಿವಾನರ ಅಧಿಕಾರಾವಧಿ ಐದು ವರ್ಷಕ್ಕೆ ಮೀರಬಾರದೆಂದೂ ಈಗಾಗಲೇ 10 ವರ್ಷ ದಿವಾನರಾಗಿ ಅಧಿಕಾರಾರೂಢರಾಗಿರುವ ಸರ್.ಮಿರ್ಜಾರವರು ನಿವೃತ್ತರಾಗಬೇಕೆಂದೂ, ಪ್ರಜಾಪ್ರತಿನಿಧಿ ಸಭೆಯಲ್ಲಿ ಸರ್ಕಾರದ ಮೇಲೆ ಒತ್ತಾಯ ತರಲಾಯಿತು.

ಈ ವೇಳೆಗೆ ಸಂಸ್ಥಾನದ ಶಾಸನ ಸಭೆಗಳ ಚುನಾವಣೆಗಳು ನಡೆದವು. ಫೈಜ್‌ಪುರದ ಕಾಂಗ್ರೆಸ್ ಅಧಿವೇಶನದಲ್ಲಾದ ನಿರ್ಣಯಕ್ಕನುಗುಣವಾಗಿ ಸ್ಟೇಟ್ ಕಾಂಗ್ರೆಸ್ ಮೊದಲ ಬಾರಿಗೆ 1937ರಲ್ಲಿ ಕಾಂಗ್ರೆಸ್ಸಿನ ಹೆಸರಿನಲ್ಲಿ ತನ್ನ ಉಮೇದುವಾರರನ್ನು

ಚುನಾವಣೆಗೆ ನಿಲ್ಲಿಸಿತು. ಕಾಂಗ್ರೆಸ್ ಪಾರ್ಲಿಮೆಂಟರಿ ಬೋರ್ಡ್‌ನ್ನು ಚುನಾವಣೆ ಸಲುವಾಗಿ ರಚಿಸಲಾಯಿತು. ಚುನಾವಣಾ ಪ್ರಚಾರ ಪ್ರಾರಂಭೋತ್ಸವದಲ್ಲಿ ಭಾಗವಹಿಸಲು ಬಂದಿದ್ದ ಕಮಲಾದೇವಿ ಚಟ್ಟೋಪಾಧ್ಯಾಯ, ಡಿ. ಪಿ. ಕರಮರಕರ್, ಡಾ॥ ನಾ. ಸು. ಹರ್ಡೀಕರ್ ಇವರ ಮೇಲೆ ಸರ್ಕಾರ ಭಾಷಣ ಪ್ರತಿಬಂಧಕ ಆಜ್ಞೆಯನ್ನು ಜಾರಿಮಾಡಿತಲ್ಲದೆ, ಆರೋಹಣ ಮಾಡಲಾಗಿದ್ದ ರಾಷ್ಟ್ರಧ್ವಜವನ್ನು ಅಧಿಕಾರಿಗಳು ಕೆಳಗಿಳಿಸಿ, ಅಪಮಾನ ಮಾಡಿದರು. ಜನಸ್ತೋಮ ಇದರಿಂದ ಆಕ್ರೋಶಗೊಂಡಿತು.

ಮೈಸೂರು ಸಂಸ್ಥಾನದಲ್ಲಿ ಚುನಾವಣೆಗಳು ನಡೆದು ಪ್ರತಿನಿಧಿಗಳು ಪ್ರಜಾಪ್ರತಿನಿಧಿ ಸಭೆಯಲ್ಲೂ, ಪ್ರಜಾಪಕ್ಷದವರು ಕಾಂಗ್ರೆಸ್ಸಿನವರು ಕೂಡಿಕೊಂಡು ನ್ಯಾಯವಿಧಾಯಕ ಸಭೆಯಲ್ಲೂ ಬಹುಮತವನ್ನು ಪಡೆದರು. ಇಷ್ಟಾದರೂ ಪ್ರಭುತ್ವದವರು ದಬ್ಬಾಳಿಕೆಯನ್ನು ಮುಂದುವರಿಸುತ್ತಲೇ ಹೋದರು. ಸರ್ಕಾರದ ದಬ್ಬಾಳಿಕೆಯನ್ನು ಪ್ರತಿಭಟಿಸಲು ಯುವಕರು ಮುಂದಾದರು. ಜಾರಿಯಲ್ಲಿದ್ದ ಪ್ರತಿಬಂಧಕಾಜ್ಞೆಯನ್ನು ಮುರಿದು ಬೆಂಗಳೂರಿನಲ್ಲಿ ಜಿ.ಆರ್. ಸ್ವಾಮಿ ಮುಂತಾದವರು ದಸ್ತಗಿರಿಯಾದರು. ಪಾರ್ಲಿಮೆಂಟರಿ ಬೋರ್ಡಿನ ಅಧ್ಯಕ್ಷರಾದ ಟಿ. ಸಿದ್ಧಲಿಂಗಯ್ಯನವರು ಕಾಂಗ್ರೆಸ್ ಅಧ್ಯಕ್ಷ ಜವಹರಲಾಲ್ ನೆಹ್ರು ಅವರಿಗೆ ಪತ್ರ ಬರೆದು ವಿದ್ಯಮಾನಗಳನ್ನು ವಿವರಿಸಿದರು. ಜವಹರಲಾಲರು ಸರ್ಕಾರದ ಅನ್ಯಾಯವನ್ನು ಶಾಂತರೀತಿಯಿಂದ ಎದುರಿಸಬೇಕೆಂದು ಉತ್ತರ ಬರೆದರು. ಇದರಿಂದ ಉತ್ತೇಜಿತರಾದ ಸಿದ್ಧಲಿಂಗಯ್ಯ ಅವರು ಕಾಂಗ್ರೆಸ್ ಕಾರ್ಯಕರ್ತರ ಸಭೆ ಕರೆದು ಅವರ ಮುಂದೆ ವಿಚಾರಗಳನ್ನಿಟ್ಟರು. ಟಿ. ಸಿದ್ಧಲಿಂಗಯ್ಯನವರು ವೀರಕೇಸರಿ ಸೀತಾರಾಮಶಾಸ್ತ್ರಿಗಳು ಮತ್ತು ತಗಡೂರು ರಾಮಚಂದ್ರರಾಯರನ್ನೊಳಗೊಂಡ ಒಂದು ಕ್ರಿಯಾ ಸಮಿತಿಯನ್ನು ರಚಿಸಲಾಯಿತು. ಸರ್ಕಾರದ ದಬ್ಬಾಳಿಕೆಯನ್ನು ಎದುರಿಸಲು ಸೂಕ್ತ ಕಾರ್ಯಕ್ರಮ ರೂಪಿಸಲು ಈ ಸಮಿತಿಗೆ ಅಧಿಕಾರ

ನೀಡಲಾಯಿತು. ಕ್ರಿಯಾಸಮಿತಿಯ ತ್ರಿಮೂರ್ತಿಗಳು ಮಿಂಚಿನ ವೇಗದಲ್ಲಿ ಸಂಸ್ಥಾನದಲ್ಲೆಲ್ಲಾ ಸಂಚರಿಸಿ, ಸರ್ಕಾರದ ದಮನನೀತಿಯನ್ನು ಖಂಡಿಸಿದರಲ್ಲದೆ, ಜವಾಬ್ದಾರಿ ಸರ್ಕಾರ ಸ್ಥಾಪನೆಗೆ ಹೋರಾಟ ನಡೆಸಲು ಜನತೆಯನ್ನು ಹುರಿದುಂಬಿಸಿದರು. ಕೆಲವು ಕಡೆ ಸಭೆ ನಡೆಯದಂತೆ ಸರ್ಕಾರ ಪ್ರತಿಬಂಧಕಾಜ್ಞೆಗಳನ್ನು ಜಾರಿಮಾಡಿತು.

ಸಂಸ್ಥಾನದ ಎಲ್ಲಾ ಕಡೆ ಪ್ರವಾಸ ಮಾಡಿ ಬಂದ ಕ್ರಿಯಾ ಸಮಿತಿಯ ಸದಸ್ಯರು ಬೆಂಗಳೂರಿನಲ್ಲಿ ದಸ್ತಗಿರಿಯಾದರು. ನ್ಯಾಯಾಲಯದ ಮುಂದೆ ಅವರನ್ನು ನಿಲ್ಲಿಸಲಾಯಿತು. ಒಳ್ಳೆಯ ನಡತೆಗಾಗಿ ಮುಚ್ಚಳಿಕೆ ಬರೆದು ಕೊಡಬೇಕೆಂದು ನ್ಯಾಯಾಧೀಶರು ತೀರ್ಪಿತ್ತರು, ಈ ತೀರ್ಪು ಮೈಸೂರಿನ ಜನತೆಗೇ ಒಂದು ಸವಾಲಿನಂತಿತ್ತು. ಜಾಮೀನು ಮುಚ್ಚಳಿಕೆ ಬರೆದುಕೊಡಲು ನಿರಾಕರಿಸಿದ್ದರಿಂದ 1937ನೇ ಅಕ್ಟೋಬರ್ 6ರಂದು ಅವರುಗಳನ್ನು ಸೆರೆಮನೆಗೆ ಒಯ್ಯಲಾಯಿತು. ಸಂಸ್ಥಾನದ ಕಾಂಗ್ರೆಸ್ ಸಮಿತಿಯನ್ನು ತಾತ್ಕಾಲಿಕವಾಗಿ ರದ್ದುಗೊಳಿಸಿ, ಕೆ.ಟಿ. ಭಾಷ್ಯಂ ಅವರನ್ನು ಪ್ರಥಮ ಸರ್ವಾಧಿಕಾರಿಯನ್ನಾಗಿ ನೇಮಿಸಲಾಯಿತು. ಭಾಷ್ಯಂ ನಯವಿನಯಗಳಿಂದ ಸರ್ ಮಿರ್ಜಾರವರ ಮನ ಒಲಿಸಲು ಯತ್ನಿಸಿದರು. ಆದರೆ 1937ನೇ ಅಕ್ಟೋಬರ್ 15ನೇ ತಾರೀಖು ಮಧ್ಯರಾತ್ರಿ ಭಾಷ್ಯಂ ಅವರನ್ನು ರಾಜದ್ರೋಹ ಭಾಷಣ ಮಾಡಿದರೆಂಬ ಕಾರಣಕ್ಕಾಗಿ ದಸ್ತಗಿರಿ ಮಾಡಲಾಯಿತು. ಪ್ರಜಾಪ್ರತಿನಿಧಿ ಸಭೆ ಸೇರುವ ಮುನ್ನಾ ದಿನ ಭಾಷ್ಯಂ ಅವರ ಬಂಧನ ಆಯಿತು.

ಭಾಷ್ಯಂ ಅವರ ಬಂಧನದಿಂದ ಕುಪಿತಗೊಂಡ ಶಾಸನಸಭಾ ಸದಸ್ಯರು ಅಕ್ಟೋಬರ್ 16ರಂದು ಮೈಸೂರಿನಲ್ಲಿ ಶಾಸನಸಭೆ ಅಧಿವೇಶನ ಆರಂಭವಾಗುವ ಮುನ್ನ ಸಭೆ ಸೇರಿ ಪ್ರಜಾಪ್ರತಿನಿಧಿ ಸಭೆಯ ನಾಯಕತ್ವವನ್ನು ಎಚ್. ಕೆ. ವೀರಣ್ಣಗೌಡರಿಗೆ ವಹಿಸಿದರು. ಪ್ರಜಾಸಂಯುಕ್ತ ಪಕ್ಷದ ಸದಸ್ಯರ ವಿಶೇಷ ಅಧಿವೇಶನ ನಡೆದು ಕಾಂಗ್ರೆಸ್ ಪಕ್ಷದೊಳಗೆ ಪ್ರಜಾಸಂಯುಕ್ತ ಪಕ್ಷವನ್ನು ವಿಲೀನಗೊಳಿಸುವ ನಿರ್ಣಯವನ್ನು ಮಾಡಿತು. ಇದರ ಪರಿಣಾಮವಾಗಿ ಪ್ರಜಾಪ್ರತಿನಿಧಿ

ಸಭೆಯ ಕಾಂಗ್ರೆಸ್ ಪಕ್ಷದ ಬಲ 30 ಇದ್ದದ್ದು ಏಕಾಏಕಿ 130ಕ್ಕೆ ಏರಿತು.

ಪ್ರಜಾಪ್ರತಿನಿಧಿ ಸಭೆಯ ಕಾರ್ಯಕಲಾಪಗಳು ಆರಂಭವಾಗುವ ಮುನ್ನ ಶ್ರೀ ವೀರಣ್ಣಗೌಡರ ನಾಯಕತ್ವದಲ್ಲಿ 130 ಜನ ಸದಸ್ಯರು, ಭಾಷ್ಯಂ ಅವರು ದಸ್ತಗಿರಿಯಾದುದನ್ನು ಖಂಡಿಸಲು, ಸಭಾತ್ಯಾಗ ಮಾಡಿದರು. ಸರ್ಕಾರದ ದಬ್ಬಾಳಿಕೆಯ ವಿರೋಧವಾಗಿ ನಡೆದ ಈ ಸಭಾತ್ಯಾಗ ಮೈಸೂರು ಪ್ರಜಾಪ್ರತಿನಿಧಿ ಇತಿಹಾಸದಲ್ಲೇ ಮೊದಲ ಬಾರಿ ಎನ್ನಬಹುದು. ದಿವಾನರ ಭಾಷಣ ಮುಗಿದ ಮೇಲೆ ಸಭಾತ್ಯಾಗ ಮಾಡಿದ ಸದಸ್ಯರೆಲ್ಲರೂ, ಬಿಳಿಯ ಖಾದಿ ಟೋಪಿ ಧರಿಸಿ 'ಕಾಂಗ್ರೆಸ್ಸಿಗೆ ಜಯವಾಗಲಿ' 'ಶ್ರೀಮನ್ಮಹಾರಾಜರಿಗೆ ಜಯವಾಗಲಿ' ಎಂಬ ಘೋಷಣೆಗಳನ್ನು ಕೂಗುತ್ತಾ ಸಭಾಪ್ರವೇಶ ಮಾಡಿದಾಗ ಮಿರ್ಜಾರವರು ಅವಾಕ್ಕಾದರು. ಈ ಮಹಾದಿನದಿಂದ ಮೈಸೂರು ಸಂಸ್ಥಾನದಲ್ಲಿ ರಾಜಕೀಯ ಹೋರಾಟ ನಡೆಸುವ ಏಕೈಕ ಸಂಸ್ಥೆ ಕಾಂಗ್ರೆಸ್ ಎಂಬುದು ಸ್ಥಿರವಾಯಿತು.

ಭಾಷ್ಯಂ ಅವರ ದಸ್ತಗಿರಿಯಾದ ಕೆಲವು ದಿನಗಳಲ್ಲಿ ರಾಜದ್ರೋಹದ ಭಾಷಣ ಮಾಡಿದರೆಂಬ ಕಾರಣಕ್ಕಾಗಿ ಎನ್. ಸಿ. ತಿಮ್ಮರೆಡ್ಡಿಯವರನ್ನು ಬಂಧಿಸಲಾಯಿತು. ಭಾಷ್ಯಂರವರು ಬಂಧಿಸಲ್ಪಟ್ಟರಾಗಿ, ಕೆ. ಚಂಗಲರಾಯ ರೆಡ್ಡಿಯವರನ್ನು ಮುಂದಿನ ಸರ್ವಾಧಿಕಾರಿಯನ್ನಾಗಿ ನೇಮಿಸಲಾಯಿತು. ಮುಂದೆ ಎಚ್.ಸಿ. ದಾಸಪ್ಪ, ತಾಳಕೆರೆ ಸುಬ್ರಹ್ಮಣ್ಯಂ, ಎಂ. ಎನ್. ಜೋಯಿಸ್, ಎಸ್. ರಂಗರಾಮಯ್ಯ, ಸೂರ್ಯ ನಾರಾಯಣ ಪಂಡಿತ್, ಕೊಟ್ಟೆ ಸಂಜಪ್ಪ ಇವರ ಬಂಧನಗಳು ಒಂದಾದ ಮೇಲೆ ಒಂದರಂತೆ ಆಯಿತು. ಎಚ್. ಸಿ. ದಾಸಪ್ಪನವರಿಗೂ, ತಾಳಕೆರೆ ಸುಬ್ರಹ್ಮಣ್ಯ ಅವರಿಗೂ ರಾಜದ್ರೋಹ ಆಪಾದನೆಯ ಮೇಲೆ ಶಿಕ್ಷೆ ವಿಧಿಸಲಾಯಿತು. ಸರ್ಕಾರವನ್ನು ಖಂಡಿಸಿ ಬರೆದ ಪತ್ರಿಕೆಗಳನ್ನು ಪ್ರಭುತ್ವದವರು ಪ್ರಕಟಣೆಗೊಳ್ಳದಂತೆ ಆಜ್ಞೆ ಮಾಡಿದರು. ದಿ.18-10-1937 ರಂದು ಜನವಾಣಿ ಸಂಪಾದಕರಾದ

ಬಿ.ಎಸ್. ಗುಪ್ತ ಮತ್ತು ಕೊಡಗಿನ ಸಿ.ಬಿ. ಮೊನ್ನಯ್ಯ ಇವರನ್ನು ಮೈಸೂರು ಸಂಸ್ಥಾನದಿಂದ ಗಡಿಪಾರು ಮಾಡಲಾಯಿತು.

ಭಾರತ ಸರ್ಕಾರ 1935ನೇ ಆಕ್ಟ್‌ಗನುಗುಣವಾಗಿ ಬ್ರಿಟಿಷ್ ಪ್ರಾಂತಗಳಿಗೆ ಸ್ವಾಯತ್ತತೆ ನೀಡಲು ಒಪ್ಪಿಗೆ ಕೊಟ್ಟಿತು. ಇದರ ಅನ್ವಯ ಭಾರತದ ಎಲ್ಲ ಬ್ರಿಟಿಷ್ ಪ್ರಾಂತಗಳಲ್ಲೂ ಶಾಸನ ಸಭೆಗಳಿಗೆ ಚುನಾವಣೆಗಳು ನಡೆದು ಕಾಂಗ್ರೆಸ್ಸು ಎಲ್ಲೆಡೆಯೂ ಬಹುಮತದಿಂದ ಗೆದ್ದು ಬಂದಿತು. ಇದರ ಪರಿಣಾಮವಾಗಿ ಕಾಂಗ್ರೆಸ್ ಸರ್ಕಾರಗಳು ಎಲ್ಲಾ ಪ್ರಾಂತ್ಯಗಳಲ್ಲೂ ಅಧಿಕಾರಕ್ಕೆ ಬಂದವು. 1938ರಿಂದ 1939ರ ವರೆಗೆ ಕಾಂಗ್ರೆಸ್ ಆಡಳಿತ ನಡೆಯಿತು. ದ್ವಿತೀಯ ಮಹಾಯುದ್ಧ ಆರಂಭವಾದಾಗ ಈ ಶಾಸನ ಸಭೆಗಳ ಸಲಹೆ ಸೂಚನೆಗಳನ್ನು ಪಡೆಯದೆಯೇ ಬ್ರಿಟಿಷ್ ಸರ್ಕಾರ ಭಾರತವನ್ನು ಯುದ್ಧದಲ್ಲಿ ತೊಡಗಿಬಿಟ್ಟಿತು. ಇದರ ಪ್ರತಿಭಟನಾರ್ಥ ಕಾಂಗ್ರೆಸ್ ಸರ್ಕಾರಗಳು ರಾಜಿನಾಮೆ ಇತ್ತು ಹೊರಬಂದವು. ಬೊಂಬಾಯಿಯಲ್ಲಿ ಅಸ್ತಿತ್ವಕ್ಕೆ ಬಂದಿದ್ದ ಕಾಂಗ್ರೆಸ್ ಸರ್ಕಾರದಲ್ಲಿ ಕರ್ನಾಟಕದ ಪರವಾಗಿ ಬೆಳಗಾಮಿನ ಎಂ.ಪಿ. ಪಾಟೀಲರು, ತಿ.ರು. ನೆಸ್ವಿ ಅವರು ಮದ್ರಾಸ್ ಸರ್ಕಾರದಲ್ಲಿ ಮಂಗಳೂರಿನ ಎ.ಬಿ. ಶೆಟ್ಟರೂ ಮಂತ್ರಿಗಳಾಗಿದ್ದರು.

1937–38ರಲ್ಲಿ ಮೈಸೂರು ಪ್ರಾಂತದಲ್ಲಿ ಕಾಂಗ್ರೆಸ್ ಚಳುವಳಿಗಳು ಒಂದಾದ ಮೇಲೊಂದು ನಡೆಸಿದವು. ನಾರಿಮನ್ ಗಲಾಟೆ ಇದಕ್ಕೆ ನಾಂದಿಯಾಯಿತು. 1937ನೇ ಅಕ್ಟೋಬರ್ ತಿಂಗಳ ಕೊನೆಯಲ್ಲಿ ಬೊಂಬಾಯಿನ ಪ್ರಸಿದ್ಧ ಕಾಂಗ್ರೆಸ್ ಮುಖಂಡರೂ, ಬೊಂಬಾಯಿ ಕಾರ್ಪೋರೇಷನ್‌ನ ಮೇಯರ್ ಅವರೂ ಆಗಿದ್ದ ಕೆ. ಫ್. ನಾರಿಮನ್ ಮೈಸೂರು ದಸರಾ ಕಾಲಕ್ಕೆ ನಡೆದ ಸ್ಥಳೀಯ ಸಂಸ್ಥೆಗಳ ಸಮ್ಮೇಳನದ ಅಧ್ಯಕ್ಷತೆ ವಹಿಸಲು ಬಂದಿದ್ದರು. ಸಮ್ಮೇಳನ ಮುಗಿದ ಮೇಲೆ ಅವರು ಮೈಸೂರು ಬೆಂಗಳೂರುಗಳಲ್ಲಿ ಸಾರ್ವಜನಿಕ ಸಭೆಗಳಲ್ಲಿ ಮಾತನಾಡಿದರು. ನಾರಿಮನ್ನರ ಭಾಷಣ ಕೇಳಲು ಬೆಂಗಳೂರಿನ ಬನಪ್ಪ ಪಾರ್ಕಿನಲ್ಲಿ 30 ಸಹಸ್ರಕ್ಕೂ ಹೆಚ್ಚು ಜನ ಸೇರಿದ್ದರು.

ನಾರಿಮನ್ನರು ವೇದಿಕೆ ಏರಿ ಭಾಷಣ ಮಾಡುತ್ತಿರುವಾಗ, ಪೋಲೀಸ್ ಇನ್‌ಸ್ಪೆಕ್ಟರ್ ಬಸಪ್ಪ ಅವರು ವೇದಿಕೆಯ ಮೇಲಕ್ಕೆ ನುಗ್ಗಿ ನಾರಿಮನ್‌ರನ್ನು ಕೈಹಿಡಿದು ಕೆಳಕ್ಕೆಳೆದು ಬಂಧಿಸ ತೊಡಗಿದರು. ಈ ಅಪಚಾರದ ಕ್ರೌರ್ಯವನ್ನು ಕಂಡ ಜನಸ್ತೋಮ ಕೆರಳಿದ ಸಿಂಹದಂತೆ ಏಕಕಂಠದಿಂದ ಗರ್ಜಿಸಿತು.

ನಾರಿಮನ್‌ರನ್ನು ಬಂದೋಬಸ್ತಿನೊಂದಿಗೆ ವ್ಯಾನಿಗೆ ಕರೆದುಕೊಂಡು ಹೋಗುವುದು ಪೋಲೀಸರಿಗೆ ಕಷ್ಟವಾಯಿತು. ನಾರಿಮನ್‌ರನ್ನು ದಸ್ತಗಿರಿ ಮಾಡಿ ಸಂಸ್ಥಾನದ ಹೊರಗೆ ಕರೆದುಕೊಂಡು ಹೋಗಿ ಬಿಡುಗಡೆಮಾಡಲಾಯಿತು. ಸಂಸ್ಥಾನದ ಅತಿಥಿಯಾಗಿ ಬಂದಿದ್ದ ಒಬ್ಬ ಗಣ್ಯವ್ಯಕ್ತಿಯನ್ನು ಅಪಮಾನಗೊಳಿಸಿದ್ದಕ್ಕೆ ಜನ ಕ್ರುದ್ಧರಾದರು. ಪ್ರತಿಭಟನಾರ್ಥವಾಗಿ 1937ನೇ ಅಕ್ಟೋಬರ್ 5ರಂದು ಬೆಂಗಳೂರಿನಲ್ಲಿ ಪ್ರಚಂಡ ಹರತಾಳ ನಡೆಯಿತು. ಸಿಟಿ ಮ್ಯಾಜಿಸ್ಟ್ರೇಟ್ ಕೋರ್ಟ್ ಮುಂದೆ, ಶಾಂತವಾಗಿ ನಿಂತಿದ್ದ ಜನರ ಮೇಲೆ ಲಾಠಿಛಾರ್ಜ್ ಮಾಡಲಾಯಿತು. ಅನಂತರ ಐ.ಜಿ.ಪಿ. ಹ್ಯಾಮಿಲ್ಟನ್ನರು ಗುಂಡು ಹಾರಿಸಿದರು. ಪೋಲೀಸರ ಗುಂಡಿನೇಟಿಗೆ ಸಿಕ್ಕಿ ಗುಂಡಪ್ಪನೆಂಬ ಕಬ್ಬನ್‌ಪೇಟೆಯ ಯುವಕನೊಬ್ಬ ಸಾವಿಗೀಡಾದನು. ಶಸ್ತ್ರಸಜ್ಜಿತ ಪೋಲೀಸರು ಇಂಟರ್‌ಮಿಡಿಯೇಟ್ ಕಾಲೇಜು ಆವರಣದೊಳಕ್ಕೆ ನುಗ್ಗಿ ವಿದ್ಯಾರ್ಥಿಗಳನ್ನು ದನಗಳನ್ನು ಅಟ್ಟುವಂತೆ ಹೊಡೆದರು. ಅಧ್ಯಾಪಕರಾದ ವಿ. ಸೀತಾರಾಮಯ್ಯನವರಿಗೂ ಪೋಲೀಸರ ಹೊಡೆತ ಬಿತ್ತು. ಇದನ್ನು ಕಂಡ ವಿದ್ಯಾರ್ಥಿಗಳು ಉದ್ರೇಕಗೊಂಡರು. ವಿದ್ಯಾರ್ಥಿಗಳು ದಿವಾನರ ನಿವಾಸವಾದ ಕಾರ್ಲ್‌ಟನ್ ಭವನದ ಕಡೆ ದೌಡಾಯಿಸಿದ್ದನ್ನು ಕಂಡ ಪೋಲೀಸರಿಗೆ ಗಾಬರಿಯಾಯಿತು. ಮಿಲಿಟರಿಯ ನೆರವನ್ನು ಕೂಡಲೇ ಅವರು ಪಡೆದರು. ಎರಡು ದಿನಗಳ ಕಾಲ ನಗರದಲ್ಲಿ ಅಶಾಂತಿ ಹರಡಿದ್ದು, ಪೋಲೀಸರಿಗೂ, ಜನಕ್ಕೂ ಅನೇಕ ಘರ್ಷಣೆಗಳಾದವು. ನಾರಿಮನ್ ಗಲಾಟೆಯಿಂದ ಮೈಸೂರು ಸಂಸ್ಥಾನದಲ್ಲಿ ಜನಜಾಗೃತಿ ಬಹಳ ಮಟ್ಟಿಗೆ ಆಯಿತು.

ನಾರಿಮನ್ ಗಲಾಟೆ ಸಂದರ್ಭದಲ್ಲಿ ಸಿ. ಬಿ. ಮೊನ್ನಯ್ಯ, ಎಂ. ರಾಮಮೂರ್ತಿ, ಮರಿಸ್ವಾಮಿ ಹಿರೇಮಠ, ಬಿ. ಎಂ. ಶೀನಪ್ಪ, ಬಿ.ಎಸ್. ಬೋರಣ್ಣಗೌಡ, ಜಿ. ಆರ್. ಸ್ವಾಮಿ, ಜಯಶೀಲನ್, ಕೆ. ಎಸ್. ಕುಮಾರನ್ ಇವರ ದಸ್ತಗಿರಿ ಆಯಿತು.

1938ರ ಫೆಬ್ರವರಿ 12ನೇ ತಾರೀಖು ಸರ್ಕಾರ ಇದ್ದಕ್ಕಿದ್ದಂತೆಯೇ ಎಲ್ಲ ರಾಜಕೀಯ ಬಂದಿಗಳನ್ನೂ ಬಿಡುಗಡೆ ಮಾಡಿತು. ಕಾಂಗ್ರೆಸ್ ಮುಖಂಡರ ಮೇಲೆ ಹೂಡಲಾಗಿದ್ದ ಎಲ್ಲ ಮೊಕದ್ದಮೆಗಳನ್ನೂ ವಾಪಸ್ ತೆಗೆದುಕೊಳ್ಳಲಾಯಿತು.

ಬಂಧನದಿಂದ ಬಿಡುಗಡೆಯಾದ ಕಾಂಗ್ರೆಸ್ ಮುಖಂಡರೂ ಕಾರ್ಯಕರ್ತರೂ 1938ನೇ ಫೆಬ್ರವರಿ 28ನೇ ತಾರೀಖು ಮಹಾಶಿವರಾತ್ರಿಯ ದಿನ ಮೈಸೂರಿನಲ್ಲಿ ಸಭೆ ಸೇರಿ 'ಮೈಸೂರು ಕಾಂಗ್ರೆಸ್' ಎಂಬ ಹೆಸರಿನ ಒಂದು ಸ್ವತಂತ್ರ ಸಂಸ್ಥೆಯನ್ನು ಸ್ಥಾಪಿಸಲು ನಿರ್ಣಯ ಮಾಡಿದರು. ಅಖಿಲ ಭಾರತ ಕಾಂಗ್ರೆಸ್ಸಿನ ಸದಸ್ಯರೆಲ್ಲರೂ ಇದಕ್ಕೆ ಸದಸ್ಯರಾಗಬಹುದೆಂದು ಗೊತ್ತುಮಾಡಲಾಯಿತು.

ಮೈಸೂರು ಅಧಿವೇಶನದಲ್ಲಿ ತೀರ್ಮಾನಿಸಿದ್ದಂತೆ, ಮೈಸೂರು ಕಾಂಗ್ರೆಸ್ಸಿನ ಪ್ರಥಮ ಅಧಿವೇಶನ ಮದ್ದೂರಿನ ಬಳಿ ಇರುವ ಶಿವಪುರದಲ್ಲಿ 1938ನೇ ಏಪ್ರಿಲ್ 26ನೇ ತಾರೀಖು ಸಮಾವೇಶಗೊಂಡಿತು. ಸಂಸ್ಥಾನದ ನಾನಾ ಕಡೆಗಳಿಂದ 20–30 ಸಹಸ್ರ ಜನ ಅಲ್ಲಿ ನೆರೆದಿದ್ದರು. ಸಮಾವೇಶವು ಸುಗಮವಾಗಿ ನಡೆಯುವುದಿತ್ತು. ಆದರೆ ಸರ್ಕಾರ ಕಾಲ್ಕೆರೆದು ಕಾಂಗ್ರೆಸ್ಸಿನೊಡನೆ ಹೋರಾಟಕ್ಕೆ ನಿಂತಿತು.

ಅಧಿವೇಶನದ ಕಾರ್ಯಕ್ರಮ ಧ್ವಜಾರೋಹಣದೊಡನೆ ಬೆಳಿಗ್ಗೆ 8 ಘಂಟೆಗೆ ಆರಂಭವಾಗುವುದಿತ್ತು. 300 ಜನರ 'ಸಶಸ್ತ್ರ ಪೋಲೀಸ್ ದಳವೊಂದು ಮೊದಲ ದಿನವೇ ಶಿವಪುರಕ್ಕೆ ಬಂದಿತ್ತು. ರಾಷ್ಟ್ರಧ್ವಜ ಆರೋಹಣ ಮಾಡಕೂಡದೆಂದು ವೈಯಕ್ತಿಕವಾಗಿ ಕಾಂಗ್ರೆಸ್

ನಾಯಕರಿಗೆಲ್ಲ ಆಜ್ಞೆ ಜಾರಿಮಾಡಲಾಯಿತು. ಕಾಂಗ್ರೆಸ್ ನಾಯಕರು ಸಮಾಲೋಚನೆ ನಡೆಸಿ ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸತಕ್ಕದ್ದೆಂದು ನಿರ್ಣಯಿಸಿದರು. ಜನಸಂದಣಿ ಜಾಸ್ತಿಯಾಗಿದ್ದುದರಿಂದ ಯಾರಿಗೂ ಆಘಾತವಾಗದ ಹಾಗೆ, ಶಾಂತರೀತಿಯಿಂದ ಧ್ವಜಾರೋಹಣ ಕಾರ್ಯಕ್ರಮ ನಡೆಸಲು ಸಿದ್ಧತೆಗಳಾದವು. ಪರಿಸ್ಥಿತಿ ಉಗ್ರವಾಗಿದ್ದರೂ ಜನ ಶಾಂತಚಿತ್ತದಿಂದಿದ್ದರು.

ಧ್ವಜಾರೋಹಣ ಮಾಡಲು ಹೊರಟ ಕಾಂಗ್ರೆಸ್ ಅಧ್ಯಕ್ಷ ಟಿ. ಸಿದ್ದಲಿಂಗಯ್ಯನವರ ದಸ್ತಗಿರಿಯಾಯಿತು. ಅವರ ನಂತರ ಸೇವಾದಳದ ಜಿ.ಓಸಿ. ಎಂ.ಎನ್., ಜೋಯಿಸರು ಧ್ವಜ ಹಾರಿಸಿದರಾಗಿ ಅವರ ಬಂಧನವಾಯಿತು. ಸಿದ್ದಲಿಂಗಯ್ಯನವರಿಂದ ಅಧ್ಯಕ್ಷ ಸ್ಥಾನಕ್ಕೆ ನೇಮಕವಾಗಿದ್ದ ಎಚ್. ಸಿ. ದಾಸಪ್ಪ ಅವರು ಎರಡನೇ ದಿನ ಬೆಳಿಗ್ಗೆ ಧ್ವಜವಂದನೆ ಮಾಡಿ ಪೋಲೀಸರಿಂದ ಬಂಧಿತರಾದರು. ಅವರ ಬಂಧನವಾದ ಕೂಡಲೇ ಎ. ವೆಂಕಟಪ್ಪನವರೂ, ಡಾ॥ ಪಾರ್ಥನಾರಾಯಣ ಪಂಡಿತರೂ, ಕೆ. ಚಂಗಲರಾಯ ರೆಡ್ಡಿಯವರೂ, ಬಳ್ಳಾರಿ ಸಿದ್ಧಮ್ಮನವರೂ, ಕೆ. ಟಿ. ಭಾಷ್ಯಂರವರೂ ಬಂಧಿತರಾದರು. ಶ್ರೀ ಎಚ್. ಬಿ. ಗುಂಡಪ್ಪಗೌಡರು ಮುಂದಿನ ಅಧ್ಯಕ್ಷರಾಗಿ ನೇಮಿಸಲ್ಪಟ್ಟರು. ಎಲ್ಲರಂತೆ ಅವರೂ ಧ್ವಜಾರೋಹಣ ಮಾಡಿದರಾದರೂ ಅವರ ದಸ್ತಗಿರಿಯಾಗಲಿಲ್ಲ. ಶಿವಪುರದ ಧ್ವಜ ಸತ್ಯಾಗ್ರಹ ಇಡೀ ದೇಶದ ಗೌರವದ ಪ್ರಶ್ನೆಯಾಗಿ ಪರಿಣಮಿಸಿತು.

ಶಿವಪುರದ ಧ್ವಜ ಸತ್ಯಾಗ್ರಹ ಮೈಸೂರು ಕಾಂಗ್ರೆಸ್ಸಿನ ಹೋರಾಟದ ಇತಿಹಾಸದಲ್ಲಿ ಒಂದು ರೋಮಾಂಚಕಾರಿ ಮೈಲುಗಲ್ಲು. ನಾಗಪುರ ಧ್ವಜ ಸತ್ಯಾಗ್ರಹದಷ್ಟೇ ಮಹತ್ವಪೂರ್ಣವಾದ ಈ ಸತ್ಯಾಗ್ರಹದಿಂದ ಪುಳಕಿತಗೊಂಡ ಅನೇಕ ಸತ್ಯಾಗ್ರಹಿಗಳು ಮೈಸೂರು ಸಂಸ್ಥಾನದ ವಿವಿಧ ಸ್ಥಳಗಳಲ್ಲಿ ಧ್ವಜಾರೋಹಣ ನಡೆಸಲು ಸಂಕಲ್ಪ ಮಾಡಿ ಸರ್ವತ್ಯಾಗಕ್ಕೂ ಸಿದ್ಧರಾದರು.

ಶಿವಪುರದ ಸತ್ಯಾಗ್ರಹ ನಡೆದ ಕೇವಲ ಕೆಲವು ದಿನಗಳ ಅಂತರದಲ್ಲಿ ಕೋಲಾರ ಜಿಲ್ಲೆಯ ವಿದುರಾಶ್ವತ್ಥದಲ್ಲಿ ಒಂದು ಹತ್ಯಾಕಾಂಡ ನಡೆಯಿತು. ವಿದುರಾಶ್ವತ್ಥ ಒಂದು ಪವಿತ್ರ ಯಾತ್ರಾಸ್ಥಳ. ಪ್ರತಿ ವರ್ಷ ಅಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ಜಾತ್ರೆಯ ದಿವಸ ಕೋಲಾರ ಜಿಲ್ಲೆಯ ಕೆಲ ಕಾಂಗ್ರೆಸ್ಸಿಗರು ಟಿ. ರಾಮಾಚಾರ್ಯರ ನೇತೃತ್ವದಲ್ಲಿ ಅಲ್ಲಿ ರಾಷ್ಟ್ರಧ್ವಜಾರೋಹಣ ಏರ್ಪಡಿಸಿದ್ದರು. ಶಾಸನೋಲ್ಲಂಘನೆ ಮಾಡಿದ ಕಾಂಗ್ರೆಸ್ಸಿಗರನ್ನು ಬಂಧಿಸುವುದು ಬಿಟ್ಟು ಪೋಲೀಸರು ಶಾಂತಿಯುತರೂ, ನಿರಪರಾಧಿಗಳೂ, ನಿರಾಯುಧರೂ ಆಗಿದ್ದು, ತೋಪಿನಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದ ಮುಗ್ಧ ಜನಗಳ ಮೇಲೆ ಲಾಠೀ ಪ್ರಹಾರ ಮಾಡಿದರು. ಜನ ಚೆಲ್ಲಾಪಿಲ್ಲಿಯಾದರು. ಯಾರೋ ಒಬ್ಬಿಬ್ಬರು ಪೋಲೀಸರ ಮೇಲೆ ಕಲ್ಲೆಸೆದರೆಂಬ ನೆಪಮಾಡಿಕೊಂಡು ಜನರ ಗುಂಪಿನ ಮೇಲೆ ವಿವೇಚನೆ ಇಲ್ಲದೆ 92 ರೌಂಡ್ ಗುಂಡು ಹಾರಿಸಲಾಯಿತು. ಈ ಹತ್ಯಾಕಾಂಡದಲ್ಲಿ 40ಕ್ಕಿಂತ ಹೆಚ್ಚು ಜನ ಸತ್ತರು. ಸತ್ತವರ ಪೈಕಿ ಅಶ್ವತ್ಥ ಪ್ರದಕ್ಷಿಣೆ ಮಾಡುತ್ತಿದ್ದ ತುಂಬು ಗರ್ಭಿಣಿ ಗೌರಮ್ಮನವರೂ ಒಬ್ಬರು. ಈ ಸುದ್ದಿ ಕಾಳ್ಗಿಚ್ಚಿನಂತೆ ದೇಶಾದ್ಯಂತ ಹರಡಿತು. ಸರ್ಕಾರ ವಸ್ತುಸ್ಥಿತಿಯನ್ನು ಜನಕ್ಕೆ ತಿಳಿಸುವ ಬದಲು ವಿಶ್ವಕರ್ನಾಟಕ, ತಾಯಿನಾಡು, ಜನವಾಣಿ ಪತ್ರಿಕೆಗಳ ಪ್ರಕಟಣೆಯನ್ನೇ ಪ್ರತಿಬಂಧಿಸಿ ಆಜ್ಞೆ ಮಾಡಿತು. ಲಂಡನ್ನಿನ ಬಿ.ಬಿ.ಸಿ. ಈ ದುರಂತದ ಸುದ್ದಿಯನ್ನು ಬಾನುಲಿ ಪ್ರಚಾರ ಮಾಡಿ ಸರ್ಕಾರದ ಈ ಪೈಶಾಚಿಕ ಕೃತ್ಯವನ್ನು ಖಂಡಿಸಿತು. ಈ ದಾರುಣ ವಾರ್ತೆಯನ್ನು ಕೇಳಿದ ಮಹಾತ್ಮ ಗಾಂಧಿಯವರು, ಇಂತಹ ದುರ್ಘಟನೆಗಳು ನಡೆಯದಿರಲು ಪ್ರಜಾಸರ್ಕಾರ ಏರ್ಪಡಿಸುವುದೇ ದಿವ್ಯೌಷಧ ಎಂದು ಹೇಳಿಕೆ ಇತ್ತರು. ಸಂಸ್ಥಾನದಾದ್ಯಂತ ಈ ಘಟನೆಯನ್ನು ಖಂಡಿಸಿ ನಿರ್ಣಯಗಳಾದವು. ಸಾರ್ವಜನಿಕ ವಿಚಾರಣೆ ನಡೆಯಬೇಕೆಂದು ಒತ್ತಾಯ ತರಲಾಯಿತು. ಸರ್ಕಾರ ಈ ದುರಂತದಿಂದ ತಲೆತಗ್ಗಿಸುವಂತಾಯಿತು. ಗಾಂಧೀಜಿ, ಸರ್ದಾರ್ ಪಟೇಲರನ್ನೂ ಜೆ. ಬಿ. ಕೃಪಲಾನಿಯವರನ್ನೂ ವಸ್ತುಸ್ಥಿತಿ ತಿಳಿಯಲೋಸುಗ ಮೈಸೂರು ಸಂಸ್ಥಾನಕ್ಕೆ ಕಳಿಸಿಕೊಟ್ಟರು. ಅವರು

ಸರ್ಕಾರದವರೊಡನೆಯೂ, ಸೆರೆಮನೆಯಲ್ಲಿದ್ದ ನಾಯಕರೊಡನೆಯೂ ಮಾತುಕತೆ ನಡೆಸಿ, ಎರಡೂ ಪಕ್ಷಗಳಿಗೂ ಒಪ್ಪಿಗೆಯಾಗುವ ಒಂದು ಒಪ್ಪಂದವನ್ನು ಕುದುರಿಸಿದರು. ಈ ಒಪ್ಪಂದದ ಮುಖ್ಯಾಂಶಗಳೆಂದರೆ (1) ಮೈಸೂರು ಕಾಂಗ್ರೆಸ್ಸನ್ನು ಶಾಸನಬದ್ಧ ರಾಜಕೀಯ ಪಕ್ಷವೆಂದು ಸರ್ಕಾರ ಅಂಗೀಕರಿಸಬೇಕು. (2) ಸರ್ಕಾರ ರಚಿಸಿದ್ದ ರಾಜಕೀಯ ಸುಧಾರಣಾ ಸಮಿತಿಯಲ್ಲಿ ಒಟ್ಟು 7 ಮಂದಿ ಕಾಂಗ್ರೆಸ್ಸಿಗರಿಗೆ ಸ್ಥಾನ ಕಲ್ಪಿಸಬೇಕು. (3) ಈ ಸುಧಾರಣಾ ಸಮಿತಿ ಜವಾಬ್ದಾರಿ ಸರ್ಕಾರ ಸ್ಥಾಪನೆಯ ಗುರಿಯನ್ನು ಹೊಂದಿರಬೇಕು. (4) ಸಾರ್ವಜನಿಕ ಸಮಾರಂಭಗಳಲ್ಲಿ ಮೈಸೂರು ಧ್ವಜದ ಜೊತೆಗೆ ರಾಷ್ಟ್ರಧ್ವಜವನ್ನೂ ಹಾರಿಸಲು ಅಡ್ಡಿ ಮಾಡಕೂಡದು. (5) ಸರ್ಕಾರ ಎಲ್ಲ ರಾಜಕೀಯ ಖೈದಿಗಳನ್ನೂ ಬಂಧನದಿಂದ ಬಿಡುಗಡೆ ಮಾಡಬೇಕು, ಪ್ರತಿಬಂಧ ಕಾಜ್ಞೆಗಳನ್ನೂ ಮೊಕದ್ದಮೆಗಳನ್ನೂ ವಾಪಸ್ಸು ಪಡೆಯಬೇಕು. ಈ ಒಪ್ಪಂದದ ಎಲ್ಲ ಅಂಶಗಳನ್ನೂ ಒಪ್ಪಿಕೊಂಡ ಸರ್ಕಾರ 1938ನೇ ಮೇ 10ನೇ ತಾರೀಖು ಒಂದು ಪ್ರಕಟಣೆ ಹೊರಡಿಸಿತು.

ರಾಜಕುಮಾರ ಜಯಚಾಮರಾಜ ಒಡೆಯರ ವಿವಾಹ ಮಹೋತ್ಸವದ ನೆನಪಿಗಾಗಿ ಮೇ 13ರಂದು ಎಲ್ಲ ರಾಜಕೀಯ ಬಂದಿಗಳನ್ನೂ ಬಿಡುಗಡೆ ಮಾಡಲಾಯಿತು. ಪಟೇಲ್ ಮಿರ್ಜಾ ಒಪ್ಪಂದದ ಪ್ರಕಾರ ರಾಜಕೀಯ ಸುಧಾರಣಾ ಸಮಿತಿಗೆ ಹಿಂದೆ ನೇಮಕಗೊಂಡಿದ್ದ 4 ಮಂದಿ ಕಾಂಗ್ರೆಸ್ಸಿಗರ ಜೊತೆಗೆ ಇನ್ನೂ ಮೂವರನ್ನು ನೇಮಿಸಲಾಯಿತು. ಇದು ಕಾಂಗ್ರೆಸ್ಸಿನ ವಿಜಯ ಎಂದು ಎಲ್ಲರೂ ಭಾವಿಸುವಂತಾಯಿತು. ಆದರೆ ಸರ್ಕಾರ ಗಡೀಪಾರು ಆಜ್ಞೆಗಳನ್ನೂ, ಪ್ರತಿಬಂಧಕಾಜ್ಞೆಗಳನ್ನೂ ಹಿಂತೆಗೆದುಕೊಳ್ಳಲಿಲ್ಲ.

ವಿದುರಾಶ್ವತ್ಥದ ದುರ್ಘಟನೆಯ ವಿಚಾರಣೆಗೆ ಜ.ವೇಪಾ ರಮೇಶಂ ಅವರ ಅಧ್ಯಕ್ಷತೆಯಲ್ಲಿ ಮೂವರ ವಿಚಾರಣಾ ಸಮಿತಿಯನ್ನು ಸರ್ಕಾರ ನೇಮಿಸಿತು. ಸಮಿತಿಯವರು ಕಾರ್ಯಕಲಾಪಗಳನ್ನು ನಡೆಸಿದ ರೀತಿಯಿಂದ ಇದು ಜನರ ಕಣ್ಣೊರೆಸುವ ಒಂದು ನಾಟಕ ಎಂಬುದು

ಸರ್ವವಿದಿತವಾಯಿತು. ಸಾರ್ವಜನಿಕರ ಪರವಾಗಿ ವಾದಮಾಡಿದ ಪ್ರಸಿದ್ಧ ನ್ಯಾಯವಾದಿ ಎಲ್.ಎಸ್. ರಾಜು ಅವರು ಅಧಿಕಾರಿಗಳನ್ನು ಹಿಡಿದು ಕೊಡವಿಬಿಟ್ಟರು.

ಮೈಸೂರಿನಲ್ಲಿ ಹೊಸದಾಗಿ ಕಟ್ಟಲಾದ ಸೆಂಟ್ರಲ್ ಪೋಲೀಸ್‌ಸ್ಟೇಷನ್ ಕಟ್ಟಡಕ್ಕೆ ಹ್ಯಾಮಿಲ್ಟನ್ ಬಿಲ್ಡಿಂಗ್ ಎಂದು ಹೆಸರಿಡಲು ಸರ್ ಮಿರ್ಜಾ ಸೂಚಿಸಿದರು. ಮೈಸೂರಿನ ಐ.ಜಿ.ಪಿ. ಹ್ಯಾಮಿಲ್ಟನ್ ಈಗಾಗಲೇ ದಬ್ಬಾಳಿಕೆಗೆ ಹೆಸರಾಗಿದ್ದರು. ತಗಡೂರು ರಾಮಚಂದ್ರರಾಯರು, ಎನ್. ಸೂರ್ಯನಾರಾಯಣರಾಯರು, ಎಂ.ಎನ್. ಜೋಯಿಸರು, ಸುಬ್ಬರಾವ್ ಉಪಾಧ್ಯಾಯರು ಹ್ಯಾಮಿಲ್ಟನ್ ಭವನದ ನಾಮಕರಣದ ವಿರುದ್ಧ ಚಳುವಳಿ ಹೂಡಲು ನಿರ್ಧರಿಸಿದರು. ಈ ಸತ್ಯಾಗ್ರಹ ದಿ.15–10–1939ರಂದು ಆರಂಭವಾಯಿತು. ಪ್ರತಿ ದಿನ ಎರಡು ಗುಂಪುಗಳಲ್ಲಿ ಸತ್ಯಾಗ್ರಹ ಹೂಡತಕ್ಕದ್ದೆಂದು ತೀರ್ಮಾನವಾಗಿದ್ದು ಈ ಸತ್ಯಾಗ್ರಹ ಫೆಬ್ರವರಿ 15 ರಿಂದ ಮಾರ್ಚ್ 31ರವರೆಗೆ ನಡೆಯಿತು.

ದಿ.13–02–1939ರ ದಿನವೇ ತಗಡೂರು ರಾಮಚಂದ್ರರಾಯರ ದಸ್ತಗಿರಿಯಾಯಿತು. 14–15ನೇ ತಾರೀಖಿನಲ್ಲಿ ಎ.ಎನ್. ಸೂರ್ಯನಾರಾಯಣರಾವ್, ಸುಬ್ಬರಾವ್ ಉಪಾಧ್ಯಾಯ, ಎಂ. ಎನ್. ಜೋಯಿಸ್, ಇವರ ಬಂಧನವಾಯಿತು. ಊರೂರುಗಳಿಂದ ಸತ್ಯಾಗ್ರಹಿಗಳು ಬಂದು ಭಾಗವಹಿಸಿದರು. ಎಂ. ಶಾಮರಾವ್, ಎಂ. ಎನ್. ವೆಂಕಟಪ್ಪ, ಎಚ್. ಹನುಮಂತಯ್ಯ, ಚಿಕ್ಕರುದ್ರಪ್ಪ, ಬೂದಿಗೆರೆ ನಾರಾಯಣಗೌಡ, ಅರಕೆರೆ ಯು. ಕೆಂಚಪ್ಪ, ಸಾಲಿಗ್ರಾಮದ ಕೆ.ಎಸ್. ಚಕ್ರವರ್ತಿ, ಎಂ.ಬಿ. ಚಂದ್ರಶೇಖರಯ್ಯ, ಪಿ.ವಿ. ಕೃಷ್ಣಯ್ಯನಾಯ್ಡು, ರಾಮಯ್ಯನಾಯ್ಡು, ಎಂ.ಎಸ್. ಸುಬ್ಬೇಗೌಡ, ಎಂ ಎಸ್. ಕೃಷ್ಣಪ್ಪಗೌಡ, ಬಿ. ಸಿದ್ದಪ್ಪಗೌಡ, ಎಂ.ಎಸ್. ಶ್ರೀಕಂಠಯ್ಯ, ಕೃಷ್ಣರಾಜನಗರದ ಸಿ.ಎಸ್. ನಾರಾಯಣಸ್ವಾಮಿ, ನಾಗಮಂಗಲ ತಾಲ್ಲೂಕು ಮಣೆಯಾರಿನ ತಿಮ್ಮೇಗೌಡ, ಚೆನ್ನಪಟ್ಟಣದ ಸಿ. ಲಿಂಗೇಗೌಡ, ಮಂಡ್ಯದ

ಪಿ.ಎಸ್. ಜವರಪ್ಪಗೌಡ, ಎಂ. ಸಿ. ಲಿಂಗಾಚಾರ್ ಮತ್ತು ಎಸ್. ರಾಮಸ್ವಾಮಿ ಇವರೇ ಮೊದಲಾದ 70 ಜನರ ದಸ್ತಗಿರಿಯಾಯಿತು.

ಆಗಸ್ಟ್ 39ರಲ್ಲಿ ಕೋಲಾರಜಿಲ್ಲಾ ನ್ಯಾಯಾಧೀಶರು ಪೋಲೀಸ್ ಆಕ್ಟ್ 39ನೇ ಸೆಕ್ಷನ್ ರೀತ್ಯಾ ರಾಬರ್ಟ್‌ಸನ್‌ಪೇಟೆಯ 5 ಮೈಲಿ ಸರಹದ್ದಿನೊಳಗೆ ಯಾವುದೇ ಸಭೆ ನಡೆಯಕೂಡದೆಂದು ಪ್ರತಿಬಂಧಕಾಜ್ಞೆ ಜಾರಿಮಾಡಿದರು. ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಎಂಟು ಮಂದಿ ಸದಸ್ಯರು, ಕೋಲಾರ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರು, ಕೋಲಾರ ಜಿಲ್ಲಾ ಕಾಂಗ್ರೆಸ್ ಸಮಿತಿ ಸದಸ್ಯರು, ಕಾಂಗ್ರೆಸ್ ಪ್ರಕಟಣ ಶಾಖಾಧಿಕಾರಿಗಳು, ವ್ಯವಸ್ಥಾಪಕ ಕಾರ್ಯದರ್ಶಿಗಳು, ಮತ್ತು ಇಬ್ಬರು ಸ್ವಯಂಸೇವಕರ ಮೇಲೆ ಈ ಆಜ್ಞೆಯನ್ನು ಜಾರಿಮಾಡಲಾಯಿತು. ಇವರೆಲ್ಲರೂ ಸಾರ್ವಜನಿಕ ಸಭೆ ನಡೆಸುವ ಸಲುವಾಗಿ ಕೆ.ಜಿ.ಎಫ್. ಪ್ರವೇಶ ಮಾಡುವವರಿದ್ದರು. ಇವರುಗಳನ್ನು ರಾಬರ್ಟ್‌ಸನ್‌ಪೇಟೆಯ ಹೊರವಲಯದಲ್ಲಿ ದಸ್ತಗಿರಿ ಮಾಡಲಾಯಿತು. ಗಣಿಗಳ ವಿಶೇಷ ನ್ಯಾಯಾಧೀಶರು ಇವರುಗಳ ವಿಚಾರಣೆ ನಡೆಸಿ ಎಲ್ಲರಿಗೂ ಕಠಿಣಶಿಕ್ಷೆ ವಿಧಿಸಿದರು. ಸರ್ಕಾರದ ಈ ಉಗ್ರಕ್ರಮದಿಂದ ದೇಶದ ಒಳಗೂ ಹೊರಗೂ ವಿಶೇಷ ಪ್ರತಿಭಟನೆ ಸಂಘಟಿತವಾಯಿತು.

ದಿ.19-09-1939ರಂದು ಬಂಧಿತರಾಗದೇ ಹೊರಗೆ ಉಳಿದಿದ್ದ ಕಾರ್ಯಕಾರಿ ಸಮಿತಿಯ ಸದಸ್ಯರು ಕಾಂಗ್ರೆಸ್ ಸಂಸ್ಥೆಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಿ ಟಿ. ಸಿದ್ದಲಿಂಗಯ್ಯ ಅವರನ್ನು ಪ್ರಥಮ ಸರ್ವಾಧಿಕಾರಿಯನ್ನಾಗಿ ನೇಮಿಸಿದರು. ಅಂದು ಸಂಜೆ ಸಿದ್ದಲಿಂಗಯ್ಯ ಬೆಂಗಳೂರಿನ ಬನಪ್ಪಾ ಪಾರ್ಕಿನಲ್ಲಿ ಸಾರ್ವಜನಿಕ ಸಭೆಯನ್ನುದ್ದೇಶಿಸಿ 'ಪೂರ್ಣಜವಾಬ್ದಾರಿ ಸರ್ಕಾರ ಸ್ಥಾಪನೆಯೇ ಕಾಂಗ್ರೆಸ್ಸಿನ ಧ್ಯೇಯ, ಬೇರೆ ಯಾವುದೇ ಸುಧಾರಣೆಯನ್ನೂ, ಕಾಂಗ್ರೆಸ್ ಒಪ್ಪುವುದಿಲ್ಲ. ಸರ್ಕಾರದೊಡನೆ ಒಂದು ಗೌರವಯುತ ಒಪ್ಪಂದಕ್ಕೆ ಮಾಡಿದ ಎಲ್ಲ ಪ್ರಯತ್ನಗಳೂ ವಿಫಲಗೊಂಡಿವೆ. ಅನ್ಯಮಾರ್ಗವಿಲ್ಲದೆ ಈಗ

ಸರ್ಕಾರದ ಸರ್ವಶಕ್ತಿಯನ್ನೂ ಎದುರಿಸಲು ಪಣತೊಟ್ಟಿದ್ದೇವೆ. ಸರ್ಕಾರ ಹಾಕುವ ಎಲ್ಲ ಪ್ರತಿಬಂಧಕಾಜ್ಞೆಗಳನ್ನೂ ಮುರಿಯಲಾಗುತ್ತದೆ. ನನ್ನಿಂದ, ನನ್ನ ಬಂಧನದ ನಂತರ ನೇಮಿತರಾಗುವ ಕಾಂಗ್ರೆಸ್ ನಾಯಕರಿಂದ ಕಾಲಕಾಲಕ್ಕೆ ಬರುವ ಆದೇಶಗಳನ್ನು ಕಾಂಗ್ರೆಸ್ಸಿಗರು ಪಾಲಿಸತಕ್ಕದ್ದೆಂದು ಪ್ರಾರ್ಥಿಸುತ್ತೇನೆ' ಎಂದು ಭಾಷಣ ಮಾಡಿದರು.

ಸಿದ್ದಲಿಂಗಯ್ಯ ಅವರ ದಸ್ತಗಿರಿಯಾಯಿತು. ಆಮೇಲೆ ಒಬ್ಬೊಬ್ಬರಾಗಿ 23 ಮಂದಿ ಸರ್ವಾಧಿಕಾರಿಗಳು ಬಂಧಿಸಲ್ಪಟ್ಟರು. ಸತ್ಯಾಗ್ರಹ ದೇಶದಲ್ಲೆಲ್ಲಾ ಹರಡಿತು. ಸುಮಾರು 200 ಮಂದಿ ಸತ್ಯಾಗ್ರಹದಲ್ಲಿ ಭಾಗವಹಿಸಿ ಶಿಕ್ಷಿಸಲ್ಪಟ್ಟರು. ಕೆಲವರನ್ನು ದಟ್ಟವಾದ ಕಾಡುಗಳಲ್ಲಿ ಬಿಡಲಾಯಿತು. ಚಿತ್ರದುರ್ಗದಲ್ಲಿ ದಿ.12-09-1939ರಲ್ಲಿ ಸತ್ಯಾಗ್ರಹ ಶಿಬಿರ ಆರಂಭವಾಯಿತು. ಹೆಂಡದಂಗಡಿಗಳ ಪಿಕೆಟಿಂಗ್, ಅರಣ್ಯ ಸತ್ಯಾಗ್ರಹಗಳನ್ನು ಸಂಘಟಿಸಲಾಯಿತು. 18ನೇ ತಾರೀಖು ತುರುವನೂರಿನಲ್ಲಿ ಅರಣ್ಯ ಸತ್ಯಾಗ್ರಹ ಪ್ರಾರಂಭವಾಯಿತು. ಸತ್ಯಾಗ್ರಹವನ್ನು ಸಂಘಟಿಸಲು ಚಿತ್ರದುರ್ಗದಿಂದ ಎಸ್. ನಿಜಲಿಂಗಪ್ಪ ಅವರು, ಎಸ್. ವಾಸುದೇವರಾಯರು, ಕೃಷ್ಣಮೂರ್ತ್ಯಾಚಾರ್ಯರು, ಬಳ್ಳಾರಿ ಸಿದ್ದಮ್ಮ ಅವರು ಮತ್ತು ನಾಗರತ್ನಮ್ಮ ಹಿರೇಮಠ ಅವರು ತುರುವನೂರಿಗೆ ಹೊರಟರು. ಸತ್ಯಾಗ್ರಹಿಗಳಾದ ರಾಜಶೇಖರಯ್ಯ ಹಿರೇಮಠ, ಪಂಡಿತ್ ಕೃಷ್ಣಾರೆಡ್ಡಿ ಮುಂತಾದವರು ಮೊದಲ ತಂಡದಲ್ಲಿದ್ದು ಈಚಲು ಮರಗಳನ್ನು ಕಡಿದರು. ನಿಜಲಿಂಗಪ್ಪ, ಶ್ರೀನಿವಾಸಮೂರ್ತ್ಯಾಚಾರ್ಯರು, ಎನ್. ಎನ್. ಚಂದೂರ್ ಮತ್ತು ಬಳ್ಳಾರಿ ಸಿದ್ಧಮ್ಮ ಮುಂತಾಗಿ 15 ಜನರ ಬಂಧನವಾಯಿತು. ತುರುವನೂರಿನ ಜನರ ಮೇಲೆ ಅರಣ್ಯ ಸತ್ಯಾಗ್ರಹ ನಡೆಸಿದ್ದಕ್ಕಾಗಿ ಪುಂಡುಗಂದಾಯ ಹಾಕಲಾಯಿತು.

1938-39ರ ಸತ್ಯಾಗ್ರಹದಲ್ಲಿ ಅರಣ್ಯ ಸತ್ಯಾಗ್ರಹ ಮಾಡಿದ 1238 ಮಂದಿ, ಗಣಿಗಳ ಶಾಸನದನ್ವಯ 31 ಮಂದಿ, 144ನೇ ಸೆಕ್ಷನ್ ಮುರಿದು 700 ಮಂದಿ, ಸಾರ್ವಜನಿಕ ರಕ್ಷಣಾ ಕಾನೂನಿನನ್ವಯ

121 ಮಂದಿ, ಪಿಕೆಟಿಂಗ್ ಮಾಡಿದ್ದಕ್ಕಾಗಿ 48 ಮಂದಿ, ಪೋಲೀಸ್ ಆಕ್ಟ್ ಮೇರೆಗೆ 24 ಮಂದಿ, ರಾಜದ್ರೋಹ ಭಾಷಣ ಮಾಡಿದ್ದಕ್ಕಾಗಿ 13 ಮಂದಿ, ನೇಕ್‌ಚಾಲ್ ಜಾಮೀನು ಖಟ್ಲೆಗನುಸಾರವಾಗಿ 12 ಮಂದಿ, ಭಾರತ ರಕ್ಷಣಾ ಶಾಸನದ ರೀತ್ಯಾ 4 ಮಂದಿ, ಪತ್ರಿಕಾ ಶಾಸನದ ರೀತ್ಯಾ ಇಬ್ಬರು, ಗಡೀಪಾರು ಆಜ್ಞೆ ಹೊರಿಸಲಾದ ಒಬ್ಬರು, ಪೊಲೀಸ್ ಆಕ್ಟ್ 45ನೇ ಸೆಕ್ಷನ್ ರೀತ್ಯಾ 45 ಮಂದಿ, ಇತರ ಕಾರಣಗಳಿಗಾಗಿ 23 ಮಂದಿ ಸತ್ಯಾಗ್ರಹಿಗಳನ್ನು ಬಂಧಿಸಲಾಗಿತ್ತು. ಹೀಗೆ ಮೈಸೂರು ಸಂಸ್ಥಾನದಲ್ಲಿ ಹೋರಾಟ ಬೃಹದ್ ರೂಪ ತಾಳಿತು. ಸತ್ಯಾಗ್ರಹಿಗಳನ್ನು ಜೈಲುಗಳಲ್ಲಿ ಇಡಲು ಸ್ಥಳವಿಲ್ಲದೆ ತಾತ್ಕಾಲಿಕ ಸೆರೆಮನೆಗಳನ್ನು ಹಲವೆಡೆ ಸ್ಥಾಪಿಸಬೇಕಾಯಿತು.

ಹೈದರಾಬಾದ್ ಕರ್ನಾಟಕದಲ್ಲಿ 1857ಕ್ಕೆ ಮೊದಲೇ ವೀರಪ್ಪ ಎಂಬ ಜಮೀನ್ದಾರರು ಬ್ರಿಟಿಷ್ ಸರ್ಕಾರದ ವಿರುದ್ಧ ಬಂಡಾಯವೆದ್ದಿದ್ದರು. ಬ್ರಿಟಿಷರು ಸೈನ್ಯ ಕಳಿಸಿ ಅವರನ್ನು ಬಂಧಿಸಿ ಗಲ್ಲಿಗೇರಿಸಿದರು. 1857ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಕಾಲಕ್ಕೆ ಕೊಪ್ಪಳದ ಬಂಡಾಯದಲ್ಲಿ ಭೀಮರಾವ್ ಮತ್ತು ಕೆಂಚನಗೌಡ ಎಂಬುವವರು ಸ್ವಾತಂತ್ರ್ಯ ಹೋರಾಟಗಾರರ ಸೈನ್ಯ ಕಟ್ಟಿ ಬ್ರಿಟಿಷರ ಮೇಲೆ ಬಿದ್ದರು. ಇವರು ಹೋರಾಡುತ್ತಲೇ ಯುದ್ಧರಂಗದಲ್ಲಿ ಸತ್ತರು. ಇತರ 77 ಜನರನ್ನು ಗುಂಡಿನ ಬಾಯಿಗೆ ಕಟ್ಟಿ ಕೊಲ್ಲಲಾಯಿತು. ಬ್ರಿಟಿಷರು ಇಬ್ಬರನ್ನು ಸಾರ್ವಜನಿಕವಾಗಿ ನೇಣು ಹಾಕಿದರು. ಜೋರಾಪುರದ ಬಂಡಾಯದಲ್ಲಿ ರಾಜಾ ವೆಂಕಟಪ್ಪನಾಯಕರು ಬ್ರಿಟಿಷರನ್ನು ಎದುರಿಸಿ, ಆತ್ಮಾರ್ಪಣೆ ಮಾಡಿ ಹುತಾತ್ಮರಾದರು.

ಗಾಂಧೀಜಿ ಅವರ ನಾಯಕತ್ವದಲ್ಲಿಯ ಸ್ವಾತಂತ್ರ್ಯ ಸಂಗ್ರಾಮದಲ್ಲಿಯೂ ಕೊಪ್ಪಳ ಮತ್ತು ಜೋರಾಪುರದ ಜನ ಧೀರತನದಿಂದ ಹೋರಾಟ ನಡೆಸಿದರು.

ಪಂಡಿತ ತಾರಾನಾಥ ಅವರು ಹೈದರಾಬಾದ್ ಸಂಸ್ಥಾನದಲ್ಲಿ ಜನಜಾಗೃತಿ ಮೂಡಿಸಿದ ಮೊದಲಿಗರು. ಅವರು ಮೂಲತಃ ದಕ್ಷಿಣ

ಕನ್ನಡ ಜಿಲ್ಲೆಯವರು. ಆತ ನಿಂತಲ್ಲಿ ನಿಲ್ಲದ ಚೇತನ; ಎಲ್ಲೆಲ್ಲೋ ಸುತ್ತಾಡಿ ನಿಜಾಮರ ಹೈದರಾಬಾದಿಗೆ ಹೋದರು. ರಾಯಚೂರಿನಲ್ಲಿ ಒಂದು ರಾಷ್ಟ್ರೀಯ ಶಾಲೆ ಆರಂಭಿಸಿದರು. ಆಗ ಅಸಹಕಾರ ಚಳುವಳಿ ನಡೆದಿತ್ತು. 1934ನೇ ಇಸವಿಯಲ್ಲಿ ಮದರಾಸಿನ ಹಿಂದೂ ಪತ್ರಿಕೆಯಲ್ಲಿ ಹೈದರಾಬಾದಿನ ದವಲತ್ತಿನ ಬಗ್ಗೆ ಅವರು ಕಟುಟೀಕೆ ಮಾಡಿ ಬರೆದರು. ಪಂಡಿತ ತಾರಾನಾಥರನ್ನು ಈ ಕಾರಣಕ್ಕಾಗಿ ನಿಜಾಂ ಸರ್ಕಾರ ಗಡೀಪಾರು ಮಾಡಿತು. ತುಂಗಭದ್ರೆಯನ್ನು ದಾಟಿ ದಕ್ಷಿಣಕ್ಕೆ ಬಂದ ತಾರಾನಾಥರು ಪ್ರೇಮಾಶ್ರಮವನ್ನು ಸ್ಥಾಪಿಸಿ ಅಲ್ಲಿ ನೆಲೆಸಿದರು.

ಜಿ. ರಾಮಾಚಾರ್ಯರು ಮತ್ತು ಜನಾರ್ಧನರಾವ್ ದೇಸಾಯರು ಆಂಧ್ರ ಮಹಾಸಭಾ ಮತ್ತು ಮಹಾರಾಷ್ಟ್ರ ಪರಿಷತ್ತಿನವರ ಒಡಗೂಡಿ ಚಳುವಳಿಯನ್ನು ಹೈದರಾಬಾದಿನಲ್ಲಿ ಸಂಘಟಿಸುತ್ತಿದ್ದರು.

ಹೈದರಾಬಾದಿನಲ್ಲಿ 1930ರ ವರೆಗೆ ಪತ್ರಿಕಾ ಸ್ವಾತಂತ್ರ್ಯ, ವಾಕ್ ಸ್ವಾತಂತ್ರ್ಯ ಇದ್ಯಾವುದರ ಸುಳಿವೂ ಇರಲಿಲ್ಲ. ರಾಜಕೀಯ ಸಭೆ ಸಮ್ಮೇಳನ ನಡೆದದ್ದೇ ಇಲ್ಲ. 1937ರ ಸುಮಾರಿಗೆ ಅಕ್ಬರ್ ಹೈದರಿ ದಿವಾನರಾಗಿ ನೇಮಕರಾದರು. ಆತ ದೊಡ್ಡ ಉದಾರಿ ವಿದ್ವಾಂಸ ಅವರ ಆಗಮನದಿಂದ ಹೈದರಾಬಾದಿನಲ್ಲಿ ಸುಧಾರಣೆಗಳು ಜಾರಿಗೆ ಬರಬಹುದೆಂದು ಜನ ಆಶಿಸಿದ್ದರು. 1937ನೇ ನವೆಂಬರ್‌ನಲ್ಲಿ ರಾಜಕೀಯ ಸಭೆಯೊಂದು ಹೈದರಾಬಾದಿನಲ್ಲಿ ನಡೆಯಿತು. ಸಭೆಗೆ ತೆಲುಗರು, ಮರಾಠಿಗರು, ಕನ್ನಡಿಗರು ಹಾಗೂ ಮುಸಲ್ಮಾನ ಮುಖ್ಯರು ಬಂದಿದ್ದರು. ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪಿಸಲಾಯಿತು. ನಿಜಾಂ ರಾಜ್ಯದಲ್ಲಿ ಶೇ.10ರಷ್ಟು ಮಂದಿ ಮಾತ್ರ ಮುಸಲ್ಮಾನರಿದ್ದರೂ, ಅವರಿಗೆ ಶೇ. 90ರಷ್ಟು ಅಧಿಕಾರ ಇತ್ತು.

ಕೆಲದಿನಗಳಲ್ಲೇ ಮೋತಿಲಾಲರ ಪುಣ್ಯ ತಿಥಿ ಬಂತು. ಮುಂದಾಳುಗಳಾದ ರಾಮಕೃಷ್ಣಧೂತ್, ಹೇಡಾ, ಬಲವಂತರಾವ್, ಸಿದ್ದವನಹಳ್ಳಿ, ಕೃಷ್ಣಶರ್ಮ, ರಾಮಸ್ವಾಮಿ ಎಲ್ಲಾ ಸೇರಿ ಕಾರ್ಯಕ್ರಮ

ರೂಪಿಸಿದರು. ಷಹಮತ್‌ಗಂಜ್‌ನಲ್ಲಿ ಸಭೆ ನಡೆಯಿತು. ಸಭೆ ನಡೆಯುವ ಸ್ಥಳಕ್ಕೆ ಇರುಕಲು ಹಾದಿ, ಜನವೂ ಹೇರಳವಾಗಿ ನೆರೆದಿದ್ದರು. ವೇದಿಕೆಯ ಸುತ್ತೆಲ್ಲ ಪೋಲೀಸರು, ಲಾಠಿ ಬಂದೂಕು ಸಜ್ಜಾಗಿತ್ತು. ಪದ್ಮಜಾನಾಯ್ಡು (ಸರೋಜಿನಿ ನಾಯ್ಡು ಅವರ ಮಗಳು) ಸಭೆಯಲ್ಲಿ ಮಾತನಾಡಿದರು. ಮರುದಿನವೇ ದಾಮೋದರದಾಸ್ ಮುಂಡಾಡಾ ಅವರನ್ನು ಹೈದರಾಬಾದ್ ಸಂಸ್ಥಾನದಿಂದ ಉಚ್ಚಾಟನೆ ಮಾಡಲಾಯಿತು. ಇನ್ನೊಬ್ಬ ಕಾರ್ಯಕರ್ತ ಬಲವಂತರಾವ್‌ಗೆ ಜೈಲಾಯಿತು.

ಇನ್ನೊಮ್ಮೆ ಒಂದು ಧ್ವಜಾರೋಹಣ ಸಮಾರಂಭ, ಸಾರಾಜುಲ್ ಹಸನ್ ತಿರುಮಜಿ ಧ್ವಜ ಹಾರಿಸುವುದಿತ್ತು. ಅವರನ್ನು ಪೋಲೀಸರು ದಾರಿಯಲ್ಲೇ ಅಡ್ಡಗಟ್ಟಿದರು. ಆತ ಪೋಲೀಸರಲ್ಲಿ ವಾದ ಮಾಡಿ, ಮುನ್ನುಗ್ಗಿ ಬರುವುದರಲ್ಲಿ ಪದ್ಮಜಾನಾಯ್ಡು ಅವರೇ ಧ್ವಜಾರೋಹಣ ನಡೆಸಿದ್ದರು. ಅಷ್ಟರಲ್ಲಿ ಓಡಿಬಂದ ತಿರುಮಜಿ ತಾನು ಮತ್ತೆ ಧ್ವಜಾರೋಹಣ ಮಾಡಲು ಬಯಸಿದರು. ತಿರುಮಜಿಯವರದ್ದು ಉನ್ನತ ವ್ಯಕ್ತಿತ್ವ, ಕಂಚಿನಕಂಠ, ಅವರು ಧ್ವಜಾರೋಹಣ ಮಾಡಿ, ಹುರುಪಿನ ಭಾಷಣ ಮಾಡಿದರು.

ದಿವಾನ್ ಅಕ್ಬರ್ ಹೈದರಿ, ಹೈದರಾಬಾದ್ ಸಂಸ್ಥಾನದ ಕಾಂಗ್ರೆಸ್ಸನ್ನು ಕೋಮುವಾದಿ ಸಂಸ್ಥೆ ಎಂದು ಹೆಸರಿಸಿ ಅದನ್ನು ಕಾನೂನುಬಾಹಿರ ಎಂದು ಘೋಷಿಸಿದರು. ಕಾಂಗ್ರೆಸ್ ಸತ್ಯಾಗ್ರಹಕ್ಕೆ ಸನ್ನದ್ಧವಾಯಿತು.

1938 ಅಕ್ಟೋಬರ್ 24ರಂದು, ಪೌರಹಕ್ಕುಗಳ ಸ್ಥಾಪನೆಗಾಗಿ ಮತ್ತು ಸಂಸ್ಥಾ ಕಾಂಗ್ರೆಸ್ಸಿನ ಮೇಲಿನ ನಿರ್ಬಂಧಗಳನ್ನು ತೆಗೆಯಲು ಒತ್ತಾಯಿಸಿ ಸತ್ಯಾಗ್ರಹ ಆರಂಭವಾಯಿತು. ವೃಷಭನಾಯಕ್, ಗೋವಿಂದರಾವ್ ನಾನಲ್, ರಾಮಕೃಷ್ಣಧೂತ್, ಜನಾರ್ಧನರಾವ್ ದೇಸಾಯಿ, ಶ್ರೀನಿವಾಸರಾವ್ ಬೋರ್‌ಕರ್, ರವಿನಾರಾಯಣರೆಡ್ಡಿ, ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. ಪೋಲೀಸರು ಬಂದು

ಸತ್ಯಾಗ್ರಹಿಗಳನ್ನು ದಸ್ತಗಿರಿ ಮಾಡಿದರು. ಲಾಠಿ ಪ್ರಹಾರ ಮಾಡಿ ಜನರ ಗುಂಪನ್ನು ಚದುರಿಸಿದರು. ಮುಖಂಡರಿಗೆ ಒಂದು ತಿಂಗಳು ಸಜಾ, 200 ರೂ. ಜುಲ್ಮಾನೆ ವಿಧಿಸಲಾಯಿತು. ಸತ್ಯಾಗ್ರಹ ಮುಂದುವರೆಯಿತು. ಸ್ವಾಮಿ ರಮಾನಂದತೀರ್ಥ, ದಿಗಂಬರರಾವ್ ಬಿಂದು, ಹನುಮಂತರಾವ್ ಮುಂತಾದ ನಾಯಕರೂ ನೂರಾರು ಸ್ವಯಂಸೇವಕರೂ ದಸ್ತಗಿರಿಯಾದರು.

ಔರಂಗಾಬಾದ್, ಪರಭಣಿ, ಜಾಲ್ನಾ, ಪೈರಣ್, ಬೀದರ್, ಬಗೇಪಲ್ಲಿ, ಹನುಮಕೊಂಡ, ಅಳವಂಡಿ, ಉಸ್ಮಾನಬಾದ್, ಮಹಬೂಬ್‌ನಗರ್, ಭೋಂಗೀರ್, ಕರೀಂನಗರ್, ಕೊಪ್ಪಳಗಳಲ್ಲೂ ಮೆರವಣಿಗೆ ಹಾಗೂ ಸಭೆಗಳು ನಡೆದವು. ನವೆಂಬರ್ ಕೊನೆಯಲ್ಲಿ ಬಂಧನಗಳಾದವು. ಕೃಷ್ಣಶರ್ಮರ ಗಡೀಪಾರಾಯಿತು.

ಎರಡನೇ ವಿಶ್ವಮಹಾಯುದ್ಧ ಆರಂಭವಾದ ಮೇಲೆ ಗಾಂಧೀಜಿ ವೈಸರಾಯರ ಭೇಟಿ ಕೋರಿ ಪತ್ರ ಬರೆದರು. ಭೇಟಿಯೇನೋ ಆಯಿತು. ಯುದ್ಧದ ಬಗ್ಗೆ ತಮ್ಮ ಖಚಿತಾಭಿಪ್ರಾಯವನ್ನು ಬಹಿರಂಗವಾಗಿ ಹೇಳುವ ವಾಕ್ ಸ್ವಾತಂತ್ರ್ಯವನ್ನು ನೀಡಲು ಅವರು ಕೇಳಿಕೊಂಡರು. ವೈಸರಾಯ್ ಲಾರ್ಡ್‌ಲಿತ್‌ಗೋ 'ಸಾಧ್ಯವಿಲ್ಲ' ಎಂದರು.

ಆಗ ಗಾಂಧೀಜಿ ವೈಯಕ್ತಿಕ ಸತ್ಯಾಗ್ರಹವನ್ನು ಪ್ರಾರಂಭಮಾಡಲು ನಿರ್ಧರಿಸಿದರು. 1941ರ ಅಕ್ಟೋಬರ್ 11ನೇ ತಾರೀಖು ಸೇರಿದ್ದ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಗಾಂಧಿ ಅವರ ಈ ಸಲಹೆಯನ್ನು ಒಪ್ಪಿಕೊಂಡಿತು. ಗಾಂಧೀಜಿ ಅವರ ಅನುಮತಿ ಇಲ್ಲದೆ ಯಾರೂ ಸತ್ಯಾಗ್ರಹ ಹೂಡಕೂಡದು ಎಂಬ ಕಟ್ಟಾಜ್ಞೆ ವಿಧಿಸಲಾಯಿತು. ಸತ್ಯಾಗ್ರಹ ನಡೆಸಲು ನೇಮಕರಾಗುವವರು ಸರ್ಕಾರಕ್ಕೆ ಪೂರ್ವಭಾವಿ ನೋಟೀಸ್ ಕೊಡತಕ್ಕದ್ದೆಂದು ಗಾಂಧೀಜಿ ಸೂಚಿಸಿದರು. ಗಾಂಧೀಜಿ ವಿನೋಬಾಭಾವೆ ಅವರನ್ನು ಪ್ರಥಮ ಸತ್ಯಾಗ್ರಹಿಯನ್ನಾಗಿಯೂ ಜವಹರ್‌ಲಾಲ್ ನೆಹರು ಅವರನ್ನು ದ್ವಿತೀಯ ಸತ್ಯಾಗ್ರಹಿಯನ್ನಾಗಿಯೂ

ಆಯ್ಕೆ ಮಾಡಿದರು. 1941ರ ಅಕ್ಟೋಬರ್ 21ನೇ ತಾರೀಖು ವಿನೋಬಾ ಸತ್ಯಾಗ್ರಹ ಆಚರಿಸಿ ದಸ್ತಗಿರಿಯಾದರು. ನೆಹರೂ ಅವರು 10 ದಿನಗಳ ನಂತರ ಸತ್ಯಾಗ್ರಹ ಹೂಡಿದರು. ಈ ವೈಯಕ್ತಿಕ ಸತ್ಯಾಗ್ರಹ 14 ತಿಂಗಳ ಕಾಲ ನಡೆಯಿತು. 1941ರ ಕೊನೆಯ ವೇಳೆಗೆ ಕಾರ್ಯಕಾರಿ ಸಮಿತಿಯ 11 ಮಂದಿ, ಎಐಸಿಸಿ ಪ್ರತಿನಿಧಿಗಳು 176 ಮಂದಿ ಮಾಜಿಮಂತ್ರಿಗಳು, 29 ಮಂದಿ, ಕೇಂದ್ರ ಶಾಸನಸಭೆಯ 22 ಸದಸ್ಯರು, ಪ್ರಾಂತೀಯ ಶಾಸನಸಭಾ ಸದಸ್ಯರು 400 ಮಂದಿ, ಅಖಿಲ ಭಾರತದಿಂದ 30,000 ಮಂದಿ ಆಯ್ದ ಕಾಂಗ್ರೆಸ್ಸಿಗರು ಈ ಚಳುವಳಿಯಲ್ಲಿ ಬಂಧಿಸಲ್ಪಟ್ಟರು. ಕರ್ನಾಟಕದಿಂದಲೇ ವೈಯಕ್ತಿಕ ಸತ್ಯಾಗ್ರಹದಲ್ಲಿ 1,121 ಮಂದಿ ಭಾಗವಹಿಸಿದ್ದು ಆ ಪೈಕಿ 1,001 ಮಂದಿಗೆ ಶಿಕ್ಷೆಗಳಾದವು. ಈ ಪೈಕಿ ಬೆಳಗಾವಿಯಿಂದ 274 ಮಂದಿ, ಬಿಜಾಪುರದಿಂದ 217 ಮಂದಿ, ಮಂಗಳೂರಿನಿಂದ 93 ಮಂದಿ, ಬೆಂಗಳೂರು ದಂಡಿನಿಂದ 15 ಮಂದಿ, ಕೊಡಗಿನಿಂದ 15 ಮಂದಿ, ಹಾಸನದಿಂದ ಶ್ರೀ ಗೊರೂರು ಸಂಪತ್ತಯ್ಯಂಗಾರ್, ಉಳಿದ ಆಶ್ರಿತ ಸಂಸ್ಥಾನಗಳಿಂದ 4 ಮಂದಿ ಇದ್ದರು.

ಬ್ರಿಟಿಷರು ಕಷ್ಟದ ಪರಿಸ್ಥಿತಿಯಲ್ಲಿದ್ದರಾಗಿ ಸರ್ಕಾರವನ್ನು ಪೇಚಿಗೆ ಸಿಕ್ಕಿಸುವ ಉದ್ದೇಶ ಗಾಂಧೀಜಿಗಿರಲಿಲ್ಲ. ಆದರೆ ಭಾರತದ ಪ್ರಜೆಗಳ ಅಭಿಪ್ರಾಯ ಪಡೆಯದೆ ವೈಸರಾಯರು ಭಾರತ ದೇಶವನ್ನು ಯುದ್ಧದಲ್ಲಿ ತೊಡಗಿಸಿದ್ದು ತಪ್ಪು ಎಂಬುದನ್ನು ಪ್ರಪಂಚದ ಎದುರಿನಲ್ಲಿ ಸಾರುವುದು ಈ ವೈಯಕ್ತಿಕ ಸತ್ಯಾಗ್ರಹ ನಡೆಸಿದ ಉದ್ದೇಶವಾಗಿತ್ತು.

14 ತಿಂಗಳ ಅನಂತರ ಕಾರ್ಯಕಾರಿ ಸಮಿತಿಯ ಸದಸ್ಯರೆಲ್ಲರ ಬಿಡುಗಡೆಯಾಯಿತು. ಆ ವೇಳೆಗೆ ಯುದ್ಧ ಭಾರತದ ಗಡಿಯನ್ನೇ ಮುಟ್ಟಿತ್ತು. ಮದರಾಸಿನ ಮೇಲೆ ಬಾಂಬ್ ಬಿತ್ತು. ಭಯಭೀತರಾದ ಜನ ಸುರಕ್ಷಿತ ಸ್ಥಳಗಳಿಗೆ ಓಡಲು ಆರಂಭಿಸಿದರು. ಭಾರತದ ಆರ್ಥಿಕ ಹಾಗೂ ಆಹಾರ ಪರಿಸ್ಥಿತಿಗಳು ಬಿಗಡಾಯಿಸಿಕೊಂಡವು. ಪದಾರ್ಥಗಳ ಬೆಲೆ ಗಗನಕ್ಕೇರಿತು. ಸರ್ಕಾರ ನೋಟುಗಳನ್ನು ಛಾಪಿಸಿ, ಚಲಾವಣೆಗೆ ತಂದು ಹಣದುಬ್ಬರದ ಪರಿಸ್ಥಿತಿಯನ್ನು ಉಂಟು ಮಾಡಿತು. 1939ರಲ್ಲಿ

ಚಲಾವಣೆಯಲ್ಲಿದ್ದ ನೋಟುಗಳ ಮೌಲ್ಯ 172 ಕೋಟಿ ರೂಪಾಯಿಗಳಿದ್ದರೆ 1945ರ ವೇಳೆಗೆ ಅದು 1151 ಕೋಟಿಗೆ ಏರಿತು.

ಬಂಗಾಳದಲ್ಲಿ ಭಾರಿ ಅನ್ನಕ್ಷಾಮ ತಲೆದೋರಿತು. 1942ನೇ ಜುಲೈ 14ನೇ ತಾರೀಖು ಸಮಾವೇಶಗೊಂಡ ಅಖಿಲ ಭಾರತ ಕಾಂಗ್ರೆಸ್ಸಿನ ಕಾರ್ಯಕಾರಿ ಸಮಿತಿ 'ಭಾರತಕ್ಕೆ ಪೂರ್ಣ ಸ್ವಾತಂತ್ರ್ಯ ಘೋಷಿಸಿ, ಬ್ರಿಟಿಷರು ಭಾರತ ಬಿಟ್ಟು ಹೊರಡಬೇಕೆಂಬ' ನಿರ್ಣಯ ಮಂಡಿಸಿತು.

ಈ ತೀರ್ಮಾನವನ್ನು ಜನತೆಯಲ್ಲಿ ಹರಡುವ ಮುನ್ನ ಕಾಂಗ್ರೆಸ್‌ನ್ನು ಮಟ್ಟಹಾಕಬೇಕೆಂದು ಸರ್ಕಾರ ಸಂಕಲ್ಪ ಮಾಡಿತು 1942ರ ಆಗಸ್ಟ್ 9ರಂದು ಬೊಂಬಾಯಿಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮಿತಿ ಕೂಡಿತು. ಗಾಂಧೀಜಿ ಸಭೆಯನ್ನು ಕುರಿತು ರಾತ್ರಿ 10 ಗಂಟೆಗೆ ಮಾತನಾಡಿ, ಕ್ವಿಟ್ ಇಂಡಿಯಾ ನಿರ್ಣಯವನ್ನು ಮಂಡಿಸಿದರು. ಸಭೆ ನಿರ್ಣಯವನ್ನು ಅನುಮೋದಿಸಿತು. ಆದರೂ ಗಾಂಧೀಜಿ ತಾವು ವೈಸರಾಯರನ್ನು ಅಂತಿಮವಾಗಿ ಭೇಟಿ ಮಾಡಿದ ಅನಂತರವೇ ಚಳುವಳಿ ಆರಂಭಿಸುವುದಾಗಿ ಕಾರ್ಯಕಾರಿ ಸಮಿತಿಯ ಸದಸ್ಯರಿಗೆ ತಿಳಿಸಿದರು. ಎ.ಐ.ಸಿ.ಸಿ. ಮುಗಿದ ಮೂರು ಘಂಟೆಯ ಒಳಗೆ ಗಾಂಧೀಜಿಯ ದಸ್ತಗಿರಿಯಾಯಿತು. ಇತರೆ ನಾಯಕರನ್ನೂ, ಅಧಿವೇಶನಕ್ಕೆ ಬಂದಿದ್ದ ಇತರ ಪ್ರಮುಖರನ್ನೂ ಬಂಧಿಸಲು ದೆಹಲಿಯಿಂದ ವಿಶೇಷ ಆದೇಶ ಬಂದಿತು. ಪ್ರಾಂತೀಯ ಕಾಂಗ್ರೆಸ್ ಸಮಿತಿಗಳನ್ನೂ, ಅಖಿಲ ಭಾರತ ಕಾಂಗ್ರೆಸ್ ಸಮಿತಿಯನ್ನೂ, ಕಾನೂನುಬಾಹಿರ ಸಂಸ್ಥೆಗಳೆಂದು ಘೋಷಿಸಿ, ಕಾಂಗ್ರೆಸ್ ಕಛೇರಿಗಳನ್ನು ವಶಪಡಿಸಿಕೊಳ್ಳಲಾಯಿತು. ಅಲ್ಲೆಲ್ಲಾ ಪೋಲೀಸರ ಸರ್ಪಕಾವಲು ಹಾಕಲಾಯಿತು.

1942ರ ಕ್ವಿಟ್ ಇಂಡಿಯಾ ಚಳುವಳಿಯ ಕಾಲಕ್ಕೆ ಕರ್ನಾಟಕವು ಅಭೂತಪೂರ್ವ ಜಾಗೃತಿಯನ್ನು ಕಂಡಿತು. ಈ ಚಳುವಳಿಯು ಬೆಳಗಾಂ, ಧಾರವಾಡ, ಬೆಂಗಳೂರು ಜಿಲ್ಲೆಗಳಲ್ಲಿ ಉಗ್ರತರವಾಗಿ

ನಡೆಯಿತು. ಸರ್ಕಾರವೆಂಬ ಯಂತ್ರವನ್ನು ಸ್ಥಗಿತಗೊಳಿಸಲು, ವಿಧ್ವಂಸಕ ಕೃತ್ಯಗಳನ್ನು ಕೈಗೊಳ್ಳಬೇಕೆಂದು ಮಶ್ರುವಾಲಾ, ಕಾಕಾಕಾಲೇಲ್ಕರ್ ಅವರು ಸೂಚನೆ ನೀಡಿದರು. ಮುಂಬೈನಲ್ಲಿ ನಡೆದ ಕರ್ನಾಟಕ ಕಾಂಗ್ರೆಸ್ ಕಾರ್ಯಕರ್ತರ ಸಭೆಯಲ್ಲಿ ದಿವಾಕರರನ್ನು ಚಳುವಳಿಯ ಸೂತ್ರವಹಿಸಲು ಕೋರುವ ನಿರ್ಣಯವಾಯಿತು. ಹುಕ್ಕೇರಿಕರ್, ವೀರನಗೌಡ ಪಾಟೀಲ್, ಕರಮರಕರ್, ನರಸಿಂಹ ದಾಬಡೆ ಮತ್ತು ಮಂಗಳೂರಿನ ಯು. ಎಸ್. ಮಲ್ಯ ಇವರನ್ನು ಸದಸ್ಯರನ್ನಾಗಿ ಉಳ್ಳ ಒಂದು ಸಮಿತಿಯನ್ನು ರಚಿಸಲಾಯಿತು. ಸರ್ಕಾರಿ ಆಜ್ಞೆಗಳನ್ನು ಉಲ್ಲಂಘನೆ ಮಾಡಲು ಈ ಸಮಿತಿ ಜನತೆಗೆ ಕರೆಕೊಟ್ಟಿತು. ಮೈಸೂರು ಸಂಸ್ಥಾನದಲ್ಲಾದರೋ ಬೊಂಬಾಯಿ ಎ.ಐ.ಸಿ.ಸಿ.ಗೆ ತೆರಳಿದ್ದ ಕಾಂಗ್ರೆಸ್ ಕಾರ್ಯಸಮಿತಿ ಸದಸ್ಯರನ್ನು ಅವರು ಹಿಂತಿರುಗುವಾಗ ಯಲಹಂಕದಲ್ಲಿ ಬಂಧಿಸಲಾಯಿತು. ಸರ್ದಾರ್ ಕೆ. ಎ. ವೆಂಕಟರಾಮಯ್ಯನವರೂ, ಎ. ಜಿ. ರಾಮಚಂದ್ರರಾಯರೂ, ಪೋಲೀಸರ ಕಣ್ಣು ತಪ್ಪಿಸಿ ಓಡಾಡುತ್ತಾ, ಸಂಸ್ಥಾನದಲ್ಲಿ ಕ್ವಿಟ್ ಇಂಡಿಯಾ ಚಳುವಳಿಯನ್ನು ಉಜ್ವಲಗೊಳಿಸಿದರು. ಈ 42ರ ಹೋರಾಟ ಪರಕೀಯರ ಆಳ್ವಿಕೆ ಅಂತ್ಯಗೊಳಿಸುವ ದೃಢ ನಿರ್ಧಾರದ ಅಂತಿಮ ಹೋರಾಟವಾಗಿದ್ದುದರಿಂದ ಈ ಹೋರಾಟ ಆಕರ್ಷಿಸದ ವ್ಯಕ್ತಿಗಳು ಭಾರತದಲ್ಲಿ ಅಲ್ಲೊಬ್ಬ ಇಲ್ಲೊಬ್ಬರಿದ್ದರು. ಕರ್ನಾಟಕದ ಜನತೆ, ಹಿಂದಿನ ಎಲ್ಲ ಹೋರಾಟಗಳಿಗಿಂತ ನೂರು ಪಟ್ಟು ಹೆಚ್ಚು ಉತ್ಸಾಹದಿಂದ ಸರ್ವಸಮರ್ಪಣ ಬುದ್ಧಿಯಿಂದ ಈ ಚಳುವಳಿಗೆ ಧುಮುಕಿತು. ಕರ್ನಾಟಕದ ಜನತೆ ಭಾರತಮಾತೆಯ ಪಾದಾರವಿಂದದಲ್ಲಿ ತನ್ನ ಅಸಂಖ್ಯಾತ ಪುತ್ರರತ್ನಗಳನ್ನು ಬಲಿಕೊಟ್ಟಿತು. ಈ ಬಲಿದಾನ ನಿರರ್ಥಕವಾಗಲಿಲ್ಲ.

ಕೆ.ಪಿ.ಸಿ.ಸಿ.ಯಿಂದ ನೇಮಕವಾದ ಸಮಿತಿ ಕರ್ನಾಟಕದ ಎಲ್ಲ ಭಾಗದ ಕೆಲಸಗಾರರೊಂದಿಗೆ ಸಂಬಂಧ ಏರ್ಪಡಿಸಿಕೊಂಡಿತ್ತು. ಧಾರವಾಡ ಜಿಲ್ಲೆಯ ಸಂಘಟನೆಯನ್ನು ಬುರ್ಲಿ ಬಿಂಧುಮಾಧವ, ಕೆ.

ಎಫ್. ಪಾಟೀಲ್, ಶಿವರಾಯಪ್ಪ, ಮಾನಣ್ಣನವರ್, ಶಿವಶಂಕರಪ್ಪ ದೇವಪುರ್, ಕರಿಯಪ್ಪ ಯೆರೀಸೀಮಿ, ತಿಮ್ಮನಗೌಡ ಮೆಣಸಿನಹಾಳ್, ಏ. ಟಿ. ಮಾಗಡಿ, ಮಹದೇವಪ್ಪ ಮೈಲಾರ್, ಗೋವಿಂದಾಚಾರ್ಯ ಅಗ್ನಿಹೋತ್ರಿ, ತಿ. ರು. ನೆಸ್ವಿ, ನಾರಾಯಣ ಹೊಸಕೇರಿ, ನರಸಿಂಹದಾಬಡೆ ಇವರು ಮಾಡಿದರು. ಬೆಳಗಾಂ ಜಿಲ್ಲೆಯ ಸಂಘಟನೆಯ ಕಾರ್ಯವನ್ನು ಚನ್ನಪ್ಪವಾಲಿ, ವಾಮನರಾವ್‌ಬಿದ್ರಿ, ವೆಂಕಟರೆಡ್ಡಿ ಹೂಲಿ, ಅಣ್ಣುಗುರುಜಿ, ಅಪ್ಪಣ್ಣ ಪಾಟೀಲ್, ಜಯದೇವ ಕುಲಕರ್ಣಿ, ರಾಮಚಂದ್ರ ವಡವಿ, ಶ್ರೀರಂಗಕಾಮತ್ ಮುಂತಾದವರು ನಿರ್ವಹಿಸಿದರು.

ಬೈಲಹೊಂಗಲ, ಹುಬ್ಬಳ್ಳಿ, ನಿಪ್ಪಾಣಿ, ಸಂಕೇಶ್ವರ, ಬೆಂಗಳೂರು, ದಾವಣಗೆರೆ, ಮೈಸೂರು, ತುಮಕೂರು ಮತ್ತು ಹಾಸನಗಳಲ್ಲಿ ಹತೋಟಿ ಮೀರಿದ ಜನರ ಮೇಲೆ ಪೋಲೀಸರು ಗುಂಡು ಹಾರಿಸಿದರು, ಒಟ್ಟು ಸುಮಾರು 530 ಜನ ಸತ್ತರು. ಎರಡು ಸಾವಿರ ಜನರು ಗಾಯಗೊಂಡರು. ಬೆಂಗಳೂರಿನಲ್ಲಿ 150 ಜನ ಮಡಿದರು. ದಾವಣಗೆರೆ ಮತ್ತು ಬೆಂಗಳೂರುಗಳಲ್ಲಿ ಪೊಲೀಸಿನವರಿಗೂ ಹತೋಟಿ ಮೀರಿದ ಜನಸ್ತೋಮಕ್ಕೂ ಯುದ್ಧವೇ ನಡೆದುಹೋಯಿತು. 1942ನೇ ಆಗಸ್ಟ್ 10ನೇ ತಾರೀಖು ಅಶ್ವಾರೋಹಿ ಸೈನಿಕರು ಬೆಂಗಳೂರಿನಲ್ಲಿ ಮೈಸೂರು ಬ್ಯಾಂಕ್ ಚೌಕದ ಬಳಿ ಜನರ ಗುಂಪಿನ ಮೇಲೆ ಕುದುರೆಗಳನ್ನು ದೌಡಾಯಿಸುತ್ತಾ ಬ್ಯಾಟನ್‌ಗಳಿಂದ ಸಿಕ್ಕಿದವರನ್ನು ತಿವಿಯಲು ಆರಂಭಿಸಿದರು. ರಾಗಿಯನ್ನು ತಂದು ಜನ ರಸ್ತೆಯಲ್ಲಿ ಚೆಲ್ಲಿದರು. ಅದರ ಪರಿಣಾಮವಾಗಿ ಅನೇಕ ಕುದುರೆಗಳು ಕಾಲುಜಾರಿ ಮುಗ್ಗುರಿಸಿದ್ದರಿಂದ ಕುದುರೆ ಸವಾರರು ಕೆಳಗೆ ಬಿದ್ದು ಗಾಯಗೊಂಡರು. ಒಬ್ಬ ಅಶ್ವಾರೋಹಿ ಸೈನಿಕ ಸ್ಥಳದಲ್ಲೇ ಮೃತಪಟ್ಟ. ಪಟೇಲರು ಶಾನುಭೋಗರು, ಯುದ್ಧ ಸಮಿತಿ ಸದಸ್ಯರು, ಸರ್ಕಾರಿ ಪ್ಲೀಡರುಗಳು, ಪಂಚಾಯ್ತಿ, ಮುನಿಸಿಪಾಲಿಟಿ, ಶಾಸನ ಸಭೆಗಳ ಸದಸ್ಯರು, ಉಪಾಧ್ಯಾಯರು, ಸಿವಿಕ್‌ಗಾರ್ಡ್‌ಗಳು,

ಬೆಂಚ್‌ಮ್ಯಾಜಿಸ್ಟ್ರೇಟರು ಎಲ್ಲರೂ ರಾಜೀನಾಮೆ ಇತ್ತು ತಮ್ಮ ಪ್ರತಿಭಟನೆ ಸೂಚಿಸಿದರು. ಬೊಂಬಾಯಿ ಹೈಕೋರ್ಟಿನ ಅಡ್ವೊಕೇಟ್ ಜನರಲ್, ಮದ್ರಾಸ್ ಶಾಸನಸಭೆಯ ಸದಸ್ಯರುಗಳಾದ ಮಂಗಳೂರಿನ ಎ.ಬಿ. ಶೆಟ್ಟಿ, ವೈಕುಂಠಬಾಳಿಗಾ, ಉಪಾಧ್ಯಾಯರುಗಳಾಗಿದ್ದ ಶ್ರೀಮತಿ ಕೇಸರಿಕೇಶವನ್, ಕಾಳಿದಾಸ್, ಗೋವಿಂದಕಾಮತ್ ರಾಜೀನಾಮೆ ಕೊಟ್ಟವರಲ್ಲಿ ಕೆಲವರು. ಸವದತ್ತಿಯಲ್ಲಿ 75 ವಿದ್ಯುತ್ ಕಂಬಗಳನ್ನು ನಾಶಮಾಡಲಾಯಿತು. ಪೋಸ್ಟ್ ಆಫೀಸ್ ಸುಡಲಾಯಿತು. ವಿಧ್ವಂಸಕ ಕಾರ್ಯಗಳ ನಿರ್ವಹಣೆಯನ್ನು ಯಶಸ್ವಿಯಾಗಿ ಮಾಡಿದವರು ವಿ.ಟಿ. ಮಾಗಡಿ, ತಿ.ರು. ನೆಸ್ವಿ, ತಿಮ್ಮನಗೌಡ, ಮಹದೇವ ಮೈಲಾರ್, ಕರಿಯಪ್ಪ, ಸಂಗೂರ್, ಚನ್ನಪ್ಪವಾಲಿ ಮುಂತಾದವರು.

1942ರ ಆಗಸ್ಟ್ ತಿಂಗಳ ಪೂರ್ತಿ ಎಲ್ಲೆಲ್ಲೂ ರಣೋತ್ಸಾಹ ಎದ್ದು ಕಾಣುತ್ತಿತ್ತು. ಬೆಂಗಳೂರು–ಹುಬ್ಬಳ್ಳಿ, ಬೆಂಗಳೂರು–ಮೈಸೂರು, ಬೆಂಗಳೂರು–ಗುಂತಕಲ್ ಮಧ್ಯೆ ಫಿಷ್‌ಪ್ಲೇಟುಗಳನ್ನೂ, ರೈಲುಕಂಬಿಗಳನ್ನೂ, ಕಿತ್ತುಹಾಕಿದ ಪ್ರಸಂಗಗಳು ವರದಿಯಾದವು. 15 ದಿನಗಳ ಕಾಲ ಗುಂತಕಲ್‌ಗೆ ಹೋಗುವ ರಾತ್ರಿ ರೈಲುಗಳ ಸಂಚಾರವನ್ನು ರದ್ದುಮಾಡಲಾಯಿತು. ದಾವಣಗೆರೆ, ಬಾಣಾವರ, ಹೊಳಲ್ಕೆರೆ, ಹೊಸದುರ್ಗ, ತಿಪಟೂರು, ಸೂಲಧಾಳ್, ತವರಗಟ್ಟಿ, ಗುಂಜಿ, ರಾಯಭಾಗ್, ದೇಸೂರು, ಸೂಳೆಭಾವಿ, ಜುನ್ನಾಳ್ ಮಿಂಚಿನಾಳ್, ಅಮರಗೋಳ, ಕುಸುಗಾಲ್, ಹೆಬ್ಬೂರ್, ಬ್ಯಾಡಗಿ, ಹುಲುಕೋಟಿ, ಮಾಯಕೊಂಡ, ಬಾಣಸಂದ್ರ, ಸವಣೂರ್, ಹೊಳೆಆಲೂರು, ನಿಂಬಾಲ್, ಕೊಡಗನೂರ್, ಚಿಕ್ಕಜಾಜೂರು, ಕ್ಯಾತಸಂದ್ರಗಳ ರೈಲ್ವೆ ನಿಲ್ದಾಣಗಳನ್ನು ಸುಟ್ಟು ಜಖಂ ಮಾಡಲಾಯಿತು. 13 ಕಡೆ ರೈಲುಗಳನ್ನು ಡಿರೈಲ್ ಮಾಡಲಾಯಿತು. ಬೆಂಗಳೂರಿನ ಹಾಲು ಮತ್ತು ತರಕಾರಿ ಮಿಲಿಟರಿ ಸರಬರಾಜನ್ನು ಒಂದು ವಾರ ಕಾಲ ಜನ ತಡೆಹಿಡಿದರು. ಬೆಂಗಳೂರು ನಗರದಲ್ಲಿ ಪಿಕೆಟಿಂಗ್

ಆರಂಭವಾದ ಕಾರಣ ಒಂದು ತಿಂಗಳು ಕಾಲ ಹೆಂಡದಂಗಡಿಗಳು ಮುಚ್ಚಲ್ಪಟ್ಟವು.

ಸರ್ಕಾರ ಪತ್ರಿಕಾಲಯಗಳ ಮೇಲೂ ದಬ್ಬಾಳಿಕೆ ನಡೆಸಿತು. ತಾಯಿನಾಡು ಮಾಲೀಕರಾದ ಪಿ.ಆರ್. ರಾಮಯ್ಯ, ಸಂಪಾದಕ ಪಿ.ಬಿ. ಶ್ರೀನಿವಾಸನ್, ವಿಶ್ವಕರ್ನಾಟಕ ಪತ್ರಿಕೆಯ ಟಿ.ಟಿ. ಶರ್ಮ, ಸಿದ್ಧವನಹಳ್ಳಿ ಕೃಷ್ಣಶರ್ಮ, ಜನವಾಣಿ ಮಾಲೀಕರಾದ ಬಿ.ಎನ್. ಗುಪ್ತ ಇವರನ್ನು ಬಂಧಿಸಿ, ಕೆಲಕಾಲ ಸೆರೆಮನೆಯಲ್ಲಿಡಲಾಯಿತು. ಆ ಪತ್ರಿಕೆಗಳ ಪ್ರಕಟಣೆಯನ್ನೂ ನಿಷೇಧಿಸಲಾಯಿತು.

ಹಿಂದೂಸ್ಥಾನ್ ಏರ್‌ಕ್ರಾಫ್ಟಿನ ಚೀಫ್ ಎಕ್ಸಿಕ್ಯುಟಿವ್ ಎಂ.ಎಚ್. ಷಾ, ಇಂಜಿನಿಯರ್ ಮೋದಿ ಇಬ್ಬರೂ ತಮ್ಮ ಹುದ್ದೆಗಳಿಗೆ ರಾಜೀನಾಮೆ ಕೊಟ್ಟರು. ಎಂ. ಎಚ್. ಷಾ ಏರ್‌ಕ್ರಾಫ್ಟ್‌ನ 5000 ಮಂದಿ ಕಾರ್ಮಿಕರ ಮೆರವಣಿಗೆಯನ್ನು ತೆಗೆದು ಬೆಂಗಳೂರು ನಗರದಲ್ಲಿ ದೊಡ್ಡ ಕೋಲಾಹಲ ಉಂಟುಮಾಡಿದರು. ಇದರ ಪರಿಣಾಮವಾಗಿ ಅವರ ದಸ್ತಗಿರಿಯೂ ಆಯಿತು.

ಬೆಂಗಳೂರಿನ, ಬಿನ್ನಿ, ರಾಜಾ, ಮಿನರ್ವಮಿಲ್‌ಗಳ 8000 ಕಾರ್ಮಿಕರು ಈ ಮೂರು ಮಿಲ್ಲುಗಳನ್ನು 14 ದಿನಗಳ ಕಾಲ ಮುಚ್ಚಿಸಿದರು. ಕೋಲಾರದ ಚಿನ್ನದ ಗಣಿಗಳ ಪೈಕಿ ಒಂದು 2 ವಾರ ಬಂದಾಯಿತು. ಕೆಲ ಕಾರ್ಮಿಕರನ್ನು ಅಲ್ಲಿಂದ ಗಡಿಪಾರು ಮಾಡಲಾಯಿತು. ಬೆಂಗಳೂರು ನಗರದ ಹೆಡ್‌ಪೋಸ್ಟಾಫೀಸನ್ನು ಆಕ್ರಮಿಸಿ 5,000 ರೂ. ದೋಚಲಾಯಿತು.

ಉತ್ತರಕನ್ನಡ ಜಿಲ್ಲೆಯ ಗಂಗಾವತಿಯಲ್ಲಿ ಒಂದು ಲಕ್ಷ ರೂಪಾಯಿ ಬೆಲೆ ಬಾಳುವ ಸರ್ಕಾರಿ ಕೋಠಿಯ ಮರದ ದಿಮ್ಮಿಗಳನ್ನೂ, ಹಟ್ಟೀಕೆರೆಯಲ್ಲಿ 15,000 ರೂ. ಬೆಲೆಬಾಳುವ ತೇಗದ ಮರದ ದಿಮ್ಮಿಗಳನ್ನೂ ನಾಶಪಡಿಸಲಾಯಿತು. ಸಿರ್ಸಿಯಲ್ಲೂ ಸರ್ಕಾರಿ ಮರದ ದಿಮ್ಮಿಗಳನ್ನು ನಾಶಮಾಡಲಾಯಿತು. ಬೆಳಗಾಂನಲ್ಲಿ ಮಿಲಿಟರಿಗೆ

ಸೇರಿದ 20,000 ರೂ. ಬೆಲೆ ಬಾಳುವ ಎರಡು ಹುಲ್ಲಿನ ಮೆದೆಗಳನ್ನು ಸುಡಲಾಯಿತು. ಹಟ್ಟಿಕೇರಿ ಪ್ರಕರಣದಲ್ಲಿ ಸುಬ್ರಾಯ ರಾಕುನಾಯಕ್, ರಾಮಕೃಷ್ಣನಾಯಕ್, ಬೀರಪ್ಪ, ಪುಟ್ಟಲಿಂಗ ಮುಂತಾದವರನ್ನು ದಸ್ತಗಿರಿ ಮಾಡಲಾಯಿತು.

ಬೆಳಗಾಂ, ಗದಗ್, ಹಾವೇರಿ, ತಾಳಿಕೋಟೆ, ಅಂಕೋಲೆ, ಮಂಗಳೂರು, ಕಾರ್ಕಳ, ಬೆಂಗಳೂರು, ಬಳ್ಳಾರಿ, ಕಾರ್ವಾರ, ಸಿರ್ಸಿ ಹೊನ್ನಾವರ, ಕುಮಟಾ, ಮೈಸೂರು, ಚಿಕ್ಕಮಗಳೂರು, ಸಾಲಿಗ್ರಾಮ ಶ್ರವಣಬೆಳಗೊಳ, ಹಾಸನಗಳಲ್ಲಿ ಪೋಲೀಸರು ಜನಸಮುದಾಯದ ಮೇಲೆ ಲಾಠಿಛಾರ್ಜ್ ಮಾಡಿದರು.

ಟೆಲಿಗ್ರಾಫ್ ವೈರ್ ಕತ್ತರಿಸಿದ್ದಕ್ಕಾಗಿ ಉತ್ತರ ಕನ್ನಡದ ಸಂಜೀವ ಕಾಮತ್ ಅವರಿಗೆ 12 ತಿಕಡಿ ಏಟುಗಳನ್ನು ಕೊಡಲಾಯಿತು.

ಹಾಸನ ಜಿಲ್ಲೆಯಲ್ಲಿ ಎಲ್ಲೆಲ್ಲೂ ಸಂತೆ ಪಿಕೆಟಿಂಗ್ ಆರಂಭವಾಯಿತು. ಶ್ರವಣಬೆಳಗೊಳದ ಸಂತೆ ಪಿಕೆಟಿಂಗ್ ನಡೆದಾಗ ಪೋಲೀಸರು ಬಲಪ್ರಯೋಗ ಮಾಡಿದರು. ಹಿಂಸೆಗೆ ಪ್ರತಿಹಿಂಸೆ ಜನರಿಂದ ನಡೆಯಿತು. ಚಳುವಳಿ ಕಾವುಹತ್ತಿ ಜನ ಅಂಚೆಕಚೇರಿ, ಪೋಲೀಸ್ ಸ್ಟೇಷನ್‌ಗಳನ್ನು ನಾಶಗೊಳಿಸಿದರು. ಈ ಸಂದರ್ಭದಲ್ಲಿ ಜನಗಳ ಮೇಲೆ ಪೋಲೀಸರು ಗುಂಡು ಹಾರಿಸಿದರು. ನಗಾರಿ ಗೌಡ ಎಂಬ ವೃದ್ಧರಿಗೆ ಕಾಲಿಗೆ ಗುಂಡು ತಾಕಿತು. ಹಲವರು ಗಾಯಗೊಂಡರು. ಪೋಲೀಸರು ನಗಾರಿ ಗೌಡ ಮುಂತಾದ ಅನೇಕರನ್ನು ಈ ಸಂದರ್ಭದಲ್ಲಿ ಬಂಧಿಸಿದರು.

1942ರ 'ಮಾಡು ಇಲ್ಲವೇ ಮಡಿ' ಚಳುವಳಿಯಲ್ಲಿ ವಿದ್ಯಾರ್ಥಿಗಳ ಮತ್ತು ಕಾರ್ಮಿಕರ ಪಾತ್ರ ಅಮೋಘವಾದದ್ದು.

ಆಗಸ್ಟ್ 9ರಂದು ವಿದ್ಯಾರ್ಥಿ ಮುಖಂಡ ಕೆ. ವಿ. ವಸಂತ್‌ರವರ ನೇತೃತ್ವದಲ್ಲಿ ವಿದ್ಯಾರ್ಥಿಗಳ ಸಂಘಟನೆ ಆಯಿತು. ಅನಿರ್ದಿಷ್ಟ ಕಾಲದವರೆಗೆ ಶಾಲಾ ಕಾಲೇಜುಗಳನ್ನು ಮುಚ್ಚಿಸಲು ವಿದ್ಯಾರ್ಥಿಗಳು

ಸತ್ಯಾಗ್ರಹ ಹೂಡಿದರು. ಇಂಥ ಸಂಘಟನೆ ಮೈಸೂರಿನಲ್ಲೂ ಎಂ. ಎ. ಕೃಷ್ಣಪ್ಪ, ಎಚ್. ವೈ. ಶಾರದಾಪ್ರಸಾದ್‌ರವರ ನೇತೃತ್ವದಲ್ಲಿ ಆಯಿತು. ಬೆಂಗಳೂರು, ಮೈಸೂರುಗಳ ಸತ್ಯಾಗ್ರಹಗಳನ್ನು ವ್ಯವಸ್ಥಿತವಾಗಿ, ಪರಿಣಾಮಕಾರಿಯಾಗಿ ವಿದ್ಯಾರ್ಥಿಗಳು ನಡೆಸಿದರು. ಅನೇಕರ ಬಂಧನವಾಯಿತು. ಲಾಠಿ ಛಾರ್ಜ್‌ಗಳಂತೂ ಲೆಕ್ಕವಿಲ್ಲದಷ್ಟಾಯಿತು. ವಿದ್ಯಾರ್ಥಿ ಚಳುವಳಿಯ ಕಾವು ಇಳಿಮುಖವಾಗುತ್ತಿದ್ದಂತೆ ಆಗಸ್ಟ್ 10ರಲ್ಲಿ ಬೆಂಗಳೂರಿನ ಕಾರ್ಮಿಕರು ಮಿಂಚಿನ ಮುಷ್ಕರ ಹೂಡಿದ್ದರ ಪರಿಣಾಮವಾಗಿ ಮತ್ತೆ ಚಳುವಳಿಗೆ ಕಾವು ಬಂತು.

ಬಿನ್ನಿಮಿಲ್, ರಾಜಾಮಿಲ್ ಮತ್ತು ಮಿನರ್ವಾ ಮಿಲ್‌ಗಳ 8,000ಕ್ಕೂ ಮೇಲ್ಪಟ್ಟು ಕಾರ್ಮಿಕರು ಎ. ಜಿ. ರಾಮಚಂದ್ರರಾವ್, ಸರ್ದಾರ್ ಕೆ. ಎ. ವೆಂಕಟರಾಮಯ್ಯ, ಎಚ್. ಎಸ್. ಸೀತಾರಾಂ, ಎನ್. ಡಿ. ಶಂಕರ್, ಎಚ್. ಎಸ್. ದೊರೆಸ್ವಾಮಿ, ಎಂ.ಎಚ್. ಷಾ, ವೈ. ಎ. ರಾಮಚಂದ್ರ, ಶ್ರೀಮತಿ ಕುಂತಳಾ, ಬುದ್ಧದಾಸ್ ಇವರುಗಳ ಸಂಘಟಿತ ಪ್ರಯತ್ನದಿಂದಾಗಿ 14 ದಿನಗಳ ಕಾಲ ಮಿಲ್ಲುಗಳನ್ನು ಮುಚ್ಚಿಸಲಾಯಿತು. ಕಾರ್ಮಿಕ ಮುಖಂಡರಾದ ಚೆಂಗಲಾರಾಧ್ಯ ದಂಪತಿಗಳು, ಆರ್. ಸೀತಾರಾಂ, ಎಂ. ಮುನಿಸ್ವಾಮಿ, ಪ್ರಭುದೇವ್, ಕಣ್ಣನ್, ಮುನಿರತ್ನಂ, ಸಿ. ಮುನಿಸ್ವಾಮಿ ಇವರ ಪಾತ್ರ ಈ ಸಂದರ್ಭದಲ್ಲಿ ಬಹು ಮಹತ್ವದ್ದಿತ್ತು.

ಈ ಮೂರು ಮಿಲ್ಲುಗಳ ಸ್ಟ್ರೈಕ್ ಆರಂಭವಾದೊಡನೆ, ಉಳಿದ ಮಿಲ್ಲುಗಳೂ, ಒಂದೊಂದಾಗಿ ಬಂದಾದವು, ಸಂಸ್ಥಾನದ ಕಾರ್ಮಿಕರೆಲ್ಲ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಸಕ್ರಿಯ ಪಾತ್ರವಹಿಸಿದ್ದರು. ಕೈಸರ್ ಇಹಿಂದ್ ಮಿಲ್ಸ್ (800 ಮಂದಿ) ಕೃಷ್ಣ ವೀವಿಂಗ್ ಮಿಲ್ಸ್ (1,000) ಸರ್ಕಾರಿ ಎಲೆಕ್ಟ್ರಿಕ್ ಫ್ಯಾಕ್ಟರಿ (500), ಸರ್ಕಾರಿ ಸಾಬೂನು ಕಾರ್ಖಾನೆ, ಬೆಂಗಳೂರು (200) ಗ್ಲಾಸ್ ಫ್ಯಾಕ್ಟರಿ, ಬೆಂಗಳೂರು (500) ಭದ್ರಾವತಿ ಕಬ್ಬಿಣದ ಕಾರ್ಖಾನೆ (4500) ಮೈಸೂರು ಪೇಪರ್‌ಮಿಲ್ಸ್ ಭದ್ರಾವತಿ

(1200) ಎಚ್.ಎ.ಎಲ್. ಕಾರ್ಖಾನೆ, ಬೆಂಗಳೂರು (6000) ಕೋಲಾರದ ಚಿನ್ನದ ಗಣಿ (4000) ಹೀಗೆ ಒಟ್ಟು 82,000 ಕಾರ್ಮಿಕರ ಪೈಕಿ 32,000 ಕಾರ್ಮಿಕರು 2 ದಿನದಿಂದ 20 ದಿನಗಳ ಅವಧಿಯವರೆಗೆ ಮುಷ್ಕರ ನಡೆಸಿದರು.

ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ನಡೆದ ಘಟನೆಗಳಲ್ಲಿ ಹುತಾತ್ಮ ಮಹದೇವ ಮೈಲಾರ ಮತ್ತು ತಿಮ್ಮನಗೌಡ ಮೆಣಸಿನಹಾಳ್ ಇವರ ಪ್ರಕರಣಗಳು, ಬೆಳಗಾಂನ ಚನ್ನಪ್ಪವಾಲಿ ಅವರ ಯಶಸ್ವೀ ಹೋರಾಟಗಳು ಮರೆಯಲಾಗದ ಘಟನೆಗಳು.

ಕ್ವಿಟ್ ಇಂಡಿಯಾ ಚಳುವಳಿಗೆ ಧವಳಪ್ರಾಯವಾಗಿರುವ ಇನ್ನೊಂದು ಕ್ರಾಂತಿಘಟ್ಟ ಈಸೂರು ಪ್ರಕರಣದ್ದು, ಅಲ್ಲಿ ಆಗಬಾರದ್ದು ಆಗಿಹೋಯಿತು. ಅದು ವಿಧಿಲೀಲೆ.

ಈಸೂರು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರಕ್ಕೆ ಸೇರಿದ ಸಂಪದ್ಭರಿತವಾದ ಗ್ರಾಮ. ಅಲ್ಲಿಯೂ ಸ್ವಾತಂತ್ರ್ಯದ ಹೋರಾಟ ಸಣ್ಣ ಪ್ರಮಾಣದಲ್ಲಿ ಆರಂಭವಾಯಿತು. ಊರಿನ ಬಾಲಕರು, ವಿದ್ಯಾರ್ಥಿಗಳು, ಗಾಂಧಿಟೋಪಿ ಧರಿಸಿಕೊಂಡು ರಾಷ್ಟ್ರ ಧ್ವಜವನ್ನು ಕೈಯಲ್ಲಿ ಹಿಡಿದುಕೊಂಡು ಅಧಿಕಾರಿಗಳನ್ನು ರಾಜೀನಾಮೆ ಕೊಡಿ ಎಂದು ಕೇಳುತ್ತಲೂ, ಜೈಘೋಷಗಳನ್ನು ಹಾಕುತ್ತಲೂ ಮೆರವಣಿಗೆಗಳನ್ನು ನಡೆಸುತ್ತಿದ್ದರು. ಒಂದು ದಿನ ವಿದ್ಯಾರ್ಥಿಗಳ ಗುಂಪು ಪಟೇಲರ ಮನೆ ಮುಂದೆ ಜಯಕಾರ ಹಾಕಿತು. ಪಟೇಲರನ್ನು ಸುತ್ತುಗಟ್ಟಿ ರಾಜೀನಾಮೆ ನೀಡುವಂತೆ ಒತ್ತಾಯ ಮಾಡಿತು. ಪಟೇಲರು ಪ್ರತಿಭಟಿಸಿದರು. ಹುಡುಗರೂ ಅಲ್ಲಿ ಸೇರಿದ್ದ ಗ್ರಾಮಸ್ಥರೂ ಪಟೇಲರಿಂದ ದಫ್ತರ ಕಿತ್ತುಕೊಂಡರು. ಸೆಪ್ಟೆಂಬರ್ 28ನೇ ತಾರೀಖು ಹತಾತ್ತನೆ ಅಮಲ್ದಾರರೂ, ಪೊಲೀಸ್ ಇನ್‌ಸ್ಪೆಕ್ಟರೂ ಈಸೂರಿಗೆ ಬಂದರು. ಅವರನ್ನು ವಿದ್ಯಾರ್ಥಿಗಳು ಮುತ್ತಿಗೆ ಹಾಕಿ ಕೆಲಸಕ್ಕೆ ರಾಜೀನಾಮೆ ಕೊಡಿರೆಂದು ಒತ್ತಾಯ ಮಾಡಿದರು. ಹ್ಯಾಟುಗಳನ್ನು ಕಿತ್ತುಕೊಂಡು

ಖಾದಿ ಟೋಪಿಗಳನ್ನು ಕೊಟ್ಟರು. ಪೋಲೀಸ್ ಅಧಿಕಾರಿ ಕೆಂಚೇಗೌಡ ಕೋಪಗೊಂಡು ಗಾಳಿಯಲ್ಲಿ ಬಂದೂಕ ಹಾರಿಸಿದರು. ನೆರೆದಿದ್ದ ಜನ, ಮಕ್ಕಳ ಮೇಲೆ ಪೋಲೀಸರು ಗುಂಡು ಹಾರಿಸಿರುವರೆಂದು ಭಾವಿಸಿ ಕೈಗೆ ಸಿಕ್ಕ ಹತ್ಯಾರುಗಳನ್ನು ಹಿಡಿದುಕೊಂಡು ಓಡೋಡಿ ಬಂದರು. ಬಂದವರೆ ಅಮಲ್ದಾರ ಚೆನ್ನಕೃಷ್ಣಯ್ಯನವರ ಮೇಲೂ, ಕೆಂಚೇಗೌಡರ ಮೇಲೂ ಹರಿಯಾಯ್ದರು. ಸ್ಥಳದಲ್ಲಿಯೇ ಅವರು ಹತರಾದರು. ಈ ಘಟನೆಯ ಬಗ್ಗೆ ಜಿಲ್ಲಾ ಕೇಂದ್ರಕ್ಕೆ ವರದಿ ಹೋದೊಡನೆ ಜಿಲ್ಲಾಧಿಕಾರಿಗಳು ವಿಶೇಷ ಪೊಲೀಸ್ ಪಡೆಯನ್ನು ತೆಗೆದುಕೊಂಡು ಈಸೂರಿಗೆ ಧಾವಿಸಿದರು. ಈಸೂರಿನ ಜನ ಪೋಲೀಸರು ಬಂದೊಡನೆ ಭಯಭೀತರಾದರು. ಮನೆಗಳಿಗೆ ಬೀಗಹಾಕಿಕೊಂಡು ರಾತ್ರೋರಾತ್ರಿ ಮಕ್ಕಳುಮರಿ ಕಟ್ಟಿಕೊಂಡು ಹತ್ತಿರದಲ್ಲಿದ್ದ ಅರಣ್ಯದೊಳಕ್ಕೆ ಓಡಿದರು. ಪೋಲೀಸರು ರಾತ್ರಿಯಲ್ಲಿ ಅರಣ್ಯದ ಮರಗಳನ್ನೇರಿ ಟಾರ್ಚ್ ಹಾಕಿಕೊಂಡು ಗ್ರಾಮಸ್ಥರ ಸುಳಿವು ಸಿಕ್ಕೀತೇ ಎಂದು ವೀಕ್ಷಿಸಿದರು. ಸಿಕ್ಕಿದ ಗಂಡಸರು, ಹುಡುಗರು, ಮಕ್ಕಳನ್ನು ಬಡಿದರು. ಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳನ್ನು ಥಳಿಸಿ ಅಮಾನುಷ ರೀತಿಯಲ್ಲಿ ಮಾನಭಂಗ ಮಾಡಿದರು. ಪೋಲೀಸರು ಸಾಹುಕಾರರ ಮನೆ, ಶ್ರೀಮಂತರ ಮನೆಗಳ ಬೀಗ ಒಡೆದು ಸಿಕ್ಕಿದ ಒಡವೆ, ವಸ್ತ್ರ, ಹಣಕಾಸುಗಳನ್ನು ದೋಚಿದರು. ಕೆಲವು ಮನೆಗಳಿಗೆ ಬೆಂಕಿಹಾಕಿ ಸುಟ್ಟರು. ಅನಂತರ ಸಿಕ್ಕಿದ ಜನರ ದಸ್ತಗಿರಿಗಳಾದವು. ಊರಿನ ಸಾಹುಕಾರರನ್ನು ಮೊದಲುಗೊಂಡು 41 ಮಂದಿಯ ಮೇಲೆ ದೊಂಬಿ, ಕೊಲೆ ಮೊಕದ್ದಮೆಗಳನ್ನು ಹೂಡಲಾಯಿತು. ಇದರ ವಿಚಾರಣೆಗೆ ನೇಮಿತರಾದ ಸುಂದರರಾಜಾರಾಯರು ವಿಚಾರಣೆ ನಡೆಸಿ ತೀರ್ಪಿತ್ತು 11 ಮಂದಿಗೆ ಮರಣದಂಡನೆಯನ್ನೂ, ಅನೇಕರಿಗೆ ಜೀವಾವಧಿ ಶಿಕ್ಷೆಯನ್ನೂ ವಿಧಿಸಿದರು. ಶಿಕ್ಷೆಯಾದವರು ಹೈಕೋರ್ಟಿಗೆ ಅಪೀಲ್ ಹಾಕಿಕೊಂಡದ್ದರ ಮೇಲೆ ಗುರಪ್ಪ, ಮಲ್ಲಪ್ಪ, ಸೂರ್ಯ ನಾರಾಯಣಾಚಾರಿ, ಹಾಲಪ್ಪ, ಶಂಕರಪ್ಪ ಎಂಬ ಐವರಿಗೆ ಮರಣದಂಡನೆ ಖಾಯಂ ಆಯಿತು. 28 ಮಂದಿಗೆ ಜೀವಾವಧಿ ಶಿಕ್ಷೆ

ಖಾಯಂಗೊಳಿಸಲಾಯಿತು. ಮರಣದಂಡನೆಗೆ ಒಳಗಾದವರಿಗೆ ಪ್ರಾಣಭಿಕ್ಷೆ ನೀಡಬೇಕೆಂದು ಸಹಸ್ರಾರು ಜನರು ಮಹಾರಾಜರಿಗೆ ಮನವಿ ಮಾಡಿಕೊಂಡರು. ಅದರಿಂದ ಏನೂ ಫಲ ದೊರೆಯಲಿಲ್ಲ. ದಿನಕ್ಕೆ ಇಬ್ಬರಂತೆ 3 ದಿನಗಳಲ್ಲಿ ಆ 5 ಮಂದಿಯನ್ನು ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಗಲ್ಲಿಗೇರಿಸಲಾಯಿತು. ಆ ಮೂರೂ ದಿನ ಅನೇಕ ರಾಜಕೀಯ ಖೈದಿಗಳು ದುಃಖದಿಂದ ಉಪವಾಸ, ಪ್ರಾರ್ಥನೆಗಳಲ್ಲಿ ತೊಡಗಿದ್ದರು. ಈ ಐವರೂ 'ಭಾರತಮಾತಕೀ ಜೈ' ಎಂದು ಜೈಕಾರ ಹಾಕುತ್ತಾ ತಮ್ಮ ಪ್ರಾಣಗಳನ್ನು ಭಾರತಾಂಬೆಯ ಪಾದಾರವಿಂದಗಳಲ್ಲಿ ಅರ್ಪಿಸಿದರು. ಆಜೀವ ಶಿಕ್ಷೆಗೆ ಗುರಿಯಾದವರ ಪೈಕಿ ಹಾಲಮ್ಮ, ಪಾರ್ವತಮ್ಮ ಎಂಬ ಇಬ್ಬರು ಹೆಂಗಸರೂ, ಆಗ ಕೇವಲ 14 ವಯಸ್ಸಿನವರಾಗಿದ್ದು ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದ ಲಿಂಗಪ್ಪ ಹನುಮಂತಪ್ಪ ಎಂಬ ಬಾಲಕನೂ ಇದ್ದನು. ಜನತೆ ಮತ್ತು ಅಧಿಕಾರಿಗಳ ಮಧ್ಯೆ ಸಂಭವಿಸುವ ವಿರಸ ವಿಪರೀತಕ್ಕೆ ಹೋದರೆ ಏನೆಲ್ಲ ಅನರ್ಥಗಳು ಸಂಭವಿಸುವುವು ಎಂಬ ಎಚ್ಚರಿಕೆಯ ಪಾಠವನ್ನು ಈ ಘಟನೆ ಪ್ರಜೆಗಳಿಗೂ ಸರ್ಕಾರಕ್ಕೂ ಮನನ ಮಾಡಿಕೊಟ್ಟಿತು.

ಹುತಾತ್ಮ ಮಹದೇವ ಮೈಲಾರ ಹೊಸರಿತ್ತಿಯವರು 1942ರ ಚಳುವಳಿಯ ಕಾಲಕ್ಕೆ ಎಂಟು ತಿಂಗಳಲ್ಲಿ 74 ವಿಧ್ವಂಸಕ ಕೃತ್ಯಗಳನ್ನು ಯಶಸ್ವಿಯಾಗಿ ಎಸಗಿದರು. 1943ರ ಏಪ್ರಿಲ್ ಒಂದರಂದು ಹೊಸರಿತ್ತಿಯಲ್ಲಿ ಹಫ್ತೆ ಲೂಟಿ ನಡೆಸುವಾಗ ಪೋಲೀಸರ ಗುಂಡಿಗೆ ಆಹುತಿಯಾದರು.

ತಿಮ್ಮನಗೌಡ ಮೆಣಸಿನಹಾಳ್ ಒಬ್ಬ ಪೈಲ್ವಾನ್ 1942ರ ಚಳುವಳಿಯಲ್ಲಿ ತನ್ನ ಇತರ ಪೈಲ್ವಾನ್ ಸ್ನೇಹಿತರೊಡನೆ ಕೂಡಿಕೊಂಡು ಚಳುವಳಿ ಮಾಡತೊಡಗಿದರು. ಅವರು ಕರಡೂರು ಚಾವಡಿ ಸುಟ್ಟು, ರಟ್ಟೆಹಳ್ಳಿ ಪೋಲೀಸರನ್ನು ನಿಶ್ಯಸ್ತ್ರಗೊಳಿಸಿ, ಅನಂತರ ಸಂಗೂರು ಕರಿಯಪ್ಪನವರನ್ನು ಕೂಡಿಕೊಂಡು ಬ್ಯಾಡಗಿ ರೈಲ್ವೇಸ್ಟೇಷನ್ ಸುಟ್ಟರು. ಬಿದರ ಕಟ್ಟೆ ಬಳಿ ಟಪ್ಪಾಲ್ ವಶಪಡಿಸಿಕೊಂಡು ರಾಣಿಬೆನ್ನೂರಿನಲ್ಲಿ

ಮೈಲ್‌ಬ್ಯಾಗ್‌ಗಳನ್ನು ಕಸಿದುಕೊಂಡರು. ಈ ಗುಂಪನ್ನು ಕಂಡಲ್ಲಿ ಗುಂಡಿಕ್ಕಿ ಕೊಲ್ಲಲು ಸರ್ಕಾರ ಆಜ್ಞೆಮಾಡಿತು. ಇವರ ಸುಳಿವು ಕೊಟ್ಟವರಿಗೆ 1,000 ರೂ. ಬಹುಮಾನ ನೀಡುವುದಾಗಿ ಸರ್ಕಾರ ಘೋಷಿಸಿತು. ಕರಿಯಪ್ಪ ಸಂಗೂರ್ ಸುಣಕಲ್ ಬಿದರೆಯ ಹೊಲ ಒಂದರಲ್ಲಿ ಹೂತಿಟ್ಟಿದ್ದ ನಾಡಬಾಂಬನ್ನು ಹೊರ ತೆಗೆಯುತ್ತಿದ್ದಾಗ ಅದು ಸಿಡಿದು ಅವರ ಬಲಮುಂಗೈ ಹಾರಿಹೋಯಿತು. ರಕ್ತ ಕೋಡಿ ಹರಿಯಿತು. ತಿಮ್ಮನಗೌಡರು ಹಂಚಿನ ಮನೆಯವರನ್ನು ಕರೆದುಕೊಂಡು ಸಂಗೂರ್ ಕರಿಯಪ್ಪನವರನ್ನು ಸರದಿಯ ಮೇಲೆ 35 ಮೈಲಿ ದೂರದ ಮೆಣಸಿನಹಾಳಿಗೆ ಎತ್ತಿಕೊಂಡು ಹೋಗಿ ತಮ್ಮ ಹೊಲದಲ್ಲಿ ಅವರ ಶುಶ್ರೂಷೆ ನಡೆಸಿದರು.

ತಿಮ್ಮನಗೌಡ ಮೆಣಸಿನಹಾಳ್ ಅವರ ಮನೆಯವರನ್ನೆಲ್ಲ ಪೋಲೀಸರು ದಸ್ತಗಿರಿ ಮಾಡಿ ಅವರ 40 ಎಕರೆ ಜಮೀನಿನಲ್ಲಿ ಬೆಳೆದಿದ್ದ ಜೋಳದ ಫಸಲನ್ನೂ ಮತ್ತು 40 ಎಕರೆ ಜಮೀನಿನಲ್ಲಿ ಬೆಳೆದು ನಿಂತಿದ್ದ ಹತ್ತಿ ಫಲಸನ್ನೂ ಮುಟ್ಟುಗೋಲು ಹಾಕಿಕೊಂಡರು. ತಿಮ್ಮನಗೌಡರು ಸುತ್ತಮುತ್ತಲ ಹಳ್ಳಿಯವರನ್ನೆಲ್ಲ ಕರೆಸಿ, ಈ ಮಾಲು ಪೋಲೀಸರಿಗೆ ಸಿಗದಂತೆ ಕಾರ್ಯಕ್ರಮ ರೂಪಿಸಿದರು. ದನ ಕಾಯುವ ಹುಡುಗರು ಊರ ದನಗಳನ್ನೆಲ್ಲ ಅಟ್ಟಿಸಿಕೊಂಡು ಬಂದು ಹತ್ತಿ ಸಮೇತ ಗಿಡಗಳನ್ನು ಮೇಯಿಸಿದರು. ಜೋಳದ ತೆನೆಗಳನ್ನು ಜನ ರಾತ್ರೋರಾತ್ರಿ ಕುಯ್ದುಕೊಂಡು ಹೋದರು. ಆದರೂ ಸರ್ಕಾರ ವಶಪಡಿಸಿಕೊಂಡ ಜೋಳ 40 ಖಂಡಿ ಆಯಿತು. ಧಾನ್ಯ ಕಾಯುತ್ತಿದ್ದ ಪೋಲೀಸರ ಮೇಲೆ ಹಲ್ಲೆ ನಡೆಸಲು ನಿರ್ಧರಿಸಿದ ತಿಮ್ಮನಗೌಡರು ಜನರನ್ನು ಸಂಘಟಿಸಿ ಹಠಾತ್ತನೆ ಒಂದು ರಾತ್ರಿ ಜೋಳ ವಶಪಡಿಸಿಕೊಂಡು ಜೋಳದ ಮೂಟೆಗಳನ್ನು ಕಾಯುತ್ತಿದ್ದ ಪೋಲೀಸರನ್ನು ಸುತ್ತುಗಟ್ಟಿ ಬಂಧಿಸಿ ಜೋಳವನ್ನೆಲ್ಲ ಜನರಿಗೆ ಹಂಚಿಬಿಟ್ಟರು.

1943ನೇ ಫೆಬ್ರವರಿ 2ನೇ ವಾರದಲ್ಲಿ ಕುಪ್ಪಲೂರ ಗ್ರಾಮದಲ್ಲಿ ಹಫ್ತೆ ಲೂಟಿ ಮಾಡುವಾಗ ಪೋಲೀಸರನ್ನು ನಿಶ್ಶಸ್ತ್ರಗೊಳಿಸಲಾಯಿತು. ಹಫ್ತೆಯ ಪೆಟ್ಟಿಗೆಯನ್ನು ಕೈಗೆತ್ತಿಕೊಳ್ಳುವ ಸಮಯದಲ್ಲಿ ಹಠಾತ್ತನೆ ಒಬ್ಬ ಪೋಲೀಸ್ ಪೇದೆ ತಿಮ್ಮನಗೌಡರ ಮೇಲೆ ಬಿದ್ದು ಅವರನ್ನು ತೆಕ್ಕೆ ಹಾಕಿಕೊಂಡ. ಇವರಿಬ್ಬರ ಸೆಣಸಾಟದಲ್ಲಿ ತಿಮ್ಮನಗೌಡರ ಬಗಲಲ್ಲಿದ್ದ ಬಾಂಬ್ ಸಿಡಿಯಿತು. ಭೀಮಕಾಯದ ತಿಮ್ಮನಗೌಡರು 'ಭಾರತ ಮಾತಾ ಕೀ ಜೈ' ಘೋಷಣೆ ಮಾಡುತ್ತಾ ನೆಲಕ್ಕುರುಳಿದರು.

ಬೆಳಗಾಂ ಜಿಲ್ಲೆಯ ಸಂಪಗಾವಿಯ ಚೆನ್ನಪ್ಪವಾಲಿ ಇನ್ನೊಬ್ಬ ಶ್ರೇಷ್ಠ ಹೋರಾಟಗಾರರು. ಇವರು 100 ಜನರನ್ನು ಕೂಡಿಕೊಂಡು ಬೈಲಹೊಂಗಲ, ಸವದತ್ತಿ, ಬೆಳಗಾಂ, ಖಾನಾಪುರ ಈ ನಾಲ್ಕೂ ತಾಲ್ಲೂಕುಗಳಲ್ಲಿ ಕ್ವಿಟ್ ಇಂಡಿಯಾ ಚಳುವಳಿ ಆರಂಭಿಸಿದರು. ಚನ್ನಪ್ಪವಾಲಿ ಹಳೆಯ ಕಾಂಗ್ರೆಸ್ಸಿಗರು. 1942ಕ್ಕೆ ಮೊದಲೇ ಅವರು ವಿವಿಧ ಸತ್ಯಾಗ್ರಹಗಳಲ್ಲಿ ಭಾಗವಹಿಸಿ 8 ವರ್ಷ ಕಾಲ ಕಾರಾಗೃಹವಾಸದ ಶಿಕ್ಷೆ ಅನುಭವಿಸಿದ್ದವರು. ಅವರೊಬ್ಬ ದೊಡ್ಡ ಸಂಘಟನಾ ಚತುರರು. ಅಕ್ಟೋಬರ್ 18ರಂದು ಅವರು ಸಂಪಗಾವಿ ಪೋಲೀಸರ ಕಣ್ಣಿಗೆ ಮೆಣಸಿನಪುಡಿ ಎರಚಿ ಎರಡು ಬಂದೂಕುಗಳನ್ನು ವಶಪಡಿಸಿಕೊಂಡರು. ವಾಲಿಯವರು ಬೈಲಹೊಂಗಲದ ಕಡೆ ನಡೆದು ಅಲ್ಲಿ ಊರ ಪಕ್ಕದ ಹೊಲಗಳಲ್ಲಿ ಜೋಳದ ಪೈರಿನ ಮಧ್ಯೆ ತಲೆಮರೆಸಿಕೊಂಡು ಇದ್ದರು. ಅಲ್ಲಿ ಅವರಿಗೆ ಕಾಲರಾಬೇನೆ ಕಾಣಿಸಿಕೊಂಡಿತು. ಡಾ॥ ನಾಯ್ಕರ್ ಅವರು ಅವರಿಗೆ ಔಷಧೋಪಚಾರ ಮಾಡಿ, ವಿಶೇಷ ಚಿಕಿತ್ಸೆಗಾಗಿ ತಮ್ಮ ಕಾರಿನಲ್ಲಿ ಅವರನ್ನು ಶಹಾಪುರಕ್ಕೆ ಕರೆದುಕೊಂಡು ಹೋಗಿ ಡಾ॥ ಗಿಂಡೆ ಜೇರಿಗೆಯವರಲ್ಲಿ ಬಿಟ್ಟರು. ಕಾಲರಾದಿಂದ ಪಾರಾದ ವಾಲಿಯವರು ಖಾನಾಪುರ ತಾಲ್ಲೂಕು ಇಟಗಿಗೆ ಬಂದು ಇಟಗೆ, ಗಂದಿಗೆವಾಡಿ, ಹಟ್ಟಿಹೊಳಿ, ಬಾಗೇವಾಡಿ, ತಿಗಡೊಳ್ಳಿಗಳ 200ಕ್ಕೂ ಹೆಚ್ಚು ಯುವಕರನ್ನು ಕಲೆಹಾಕಿ, ಐವತ್ತೈವತ್ತು ಜನರ 4 ಗುಂಪುಗಳಾಗಿ ಅವರನ್ನು ವಿಂಗಡಿಸಿ ವಿಧ್ವಂಸಕ ಕಾರ್ಯಾಚರಣೆಯಲ್ಲಿ ತೊಡಗಿಸಿದರು. ನಂದಗಡ ಅಂಚೆ ಕಚೇರಿ ಒಡೆಯಲಾಯಿತು. ದೇಸನೂರು ರೇಲ್ವೇ

ನಿಲ್ದಾಣ ಸುಡಲಾಯಿತು. ಮುಂದೆ ಖಾನಾಪುರ ತಾಲ್ಲೂಕು ತೊಲಗಿಯಲ್ಲಿ 30 ಹಳ್ಳಿಗಳಿಂದ ಸಂಗ್ರಹವಾದ ಹಫ್ತೆ ಹಣ ಲೂಟಿ ಮಾಡಲು ಉದ್ದೇಶಿಸಿ ಅಲ್ಲಿ ಕಾವಲಿದ್ದ 30 ಜನ ಪೋಲೀಸರನ್ನು ಮುತ್ತಿಗೆ ಹಾಕಿ ಸಂಗ್ರಹವಾದ ಹಣವನ್ನು ಲೂಟಿ ಮಾಡಿ ಅಲ್ಲಿಂದ ಪಾರಾದರು. ಅದೇ ದಿನ ಬೊಂಬಾಯಿ ಗೌರ್ನರ್ ಬೆಳಗಾಂಗೆ ಭೇಟಿ ನೀಡಿದ್ದು ಅವರಿಗೆ ಈ ವಿಷಯ ತಿಳಿದ ಮೇಲೆ ಅವರು ವಾಲಿಯವರನ್ನು ಹಿಡಿದುಕೊಟ್ಟವರಿಗೆ 5,000 ರೂ. ಬಹುಮಾನ ನೀಡುವುದಾಗಿ ಘೋಷಣೆ ಮಾಡಿದರು. ವಿಧ್ವಂಸಕ ಕೃತ್ಯಗಳನ್ನು ನಿಲ್ಲಿಸಬೇಕೆಂದು, ನಾಯಕರಿಂದ ಅಣತಿ ಬಂತಾಗಿ ತಾವು ಕಟ್ಟಿದ ಸೈನ್ಯವನ್ನು ವಾಲಿಯವರು ವಿಸರ್ಜನೆ ಮಾಡಿದರು. ಬೆಂಗಳೂರಿಗೆ ಹೋಗಿದ್ದಾಗ ಅಲ್ಲಿ ಅವರ ದಸ್ತಗಿರಿಯಾಯಿತು.

ಒಟ್ಟಿನಲ್ಲಿ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಕರ್ನಾಟಕದಲ್ಲೇ 940 ಜನ ಗುಂಡಿನೇಟಿನಿಂದ ಸತ್ತರು. 1,630 ಮಂದಿಗೆ ಗಾಯಗಳಾದವು. ಜನರ ಗುಂಪನ್ನು ಹತೋಟಿಗೆ ತರಲು 60 ಸಾರಿ ಮಿಲಿಟರಿಯವರನ್ನು ಕರೆಸಬೇಕಾಯಿತು. ಏರಿಯಲ್ ಬಾಂಬಿಂಗ್ 6 ಸಾರಿ ನಡೆಯಿತು. 318 ರೈಲ್ವೇ ಸ್ಟೇಷನ್‌ಗಳನ್ನು ಸುಡಲಾಯಿತು. 12,000 ಸ್ಥಳಗಳಲ್ಲಿ ಟೆಲಿಫೋನ್ ಮತ್ತು ಟೆಲಿಗ್ರಾಫ್ ವೈರ್‌ಗಳನ್ನು ಕತ್ತರಿಸಲಾಯಿತು. 945 ಅಂಚೆ ಕಚೇರಿಗಳನ್ನು ಆಕ್ರಮಣ ಮಾಡಲಾಯಿತು. 59 ರೈಲ್ವೆ ಅಪಘಾತಗಳಾದವು. 18 ಲಕ್ಷ ರೂಪಾಯಿಗಳ ರೈಲ್ವೆ ಸರಕುಗಳನ್ನು ನಾಶಮಾಡಲಾಯಿತು. 90 ಲಕ್ಷ ರೂ.ಗಳ ಟ್ರಕ್ಕುಗಳನ್ನು ಜಖಂ ಮಾಡಲಾಯ್ತು. ಅನೇಕ ರೈಲ್ವೇ ಸ್ಟೇಷನ್ ಕಟ್ಟಡಗಳನ್ನು ನಾಶಮಾಡಲಾಯಿತು. ಅದರ ಅಂದಾಜು ನಷ್ಟ 90 ಲಕ್ಷ ರೂ.ಗಳು, 50 ಹಳ್ಳಿಗಳ ಮೇಲೆ 26,50,000ರೂ.ಗಳ ಪುಂಡುಗಂದಾಯ ಹೇರಲಾಯಿತು.

9 ಮುಖ್ಯ ಘಟನೆಗಳಲ್ಲಿ 29 ಮಂದಿ ಪೋಲೀಸ್ ಅಧಿಕಾರಿಗಳಿಂದ ಆಯುಧಗಳನ್ನು ಕಸಿದು ಕೊಳ್ಳಲಾಯಿತು. ಗುನೆಗಾರರನ್ನು ಹಿಡಿದುಕೊಟ್ಟವರಿಗೆ 250 ರಿಂದ 5000 ರೂ.ಗಳವರೆಗೆ ಬಹುಮಾನ

ಕೊಡುವುದಾಗಿ ಸಾರಲಾದವರ ಸಂಖ್ಯೆ ಬೆಳಗಾಂ ಜಿಲ್ಲೆಯಲ್ಲಿ 22 ಮಂದಿ ಧಾರವಾಡ ಜಿಲ್ಲೆಯಲ್ಲಿ 30 ಉತ್ತರಕನ್ನಡ ಜಿಲ್ಲೆಯಲ್ಲಿ 14 ಮೈಸೂರು ಸಂಸ್ಥಾನದಲ್ಲಿ 12.

1941ರಲ್ಲಿ ರಾಯಚೂರಿನಲ್ಲಿ ಫಡ್ನೀಸ್ ಅಡವೀರಾಯರು ವೈಯಕ್ತಿಕ ಸತ್ಯಾಗ್ರಹ ನಡೆಸಿದರು. ಎರಡನೆ ಸತ್ಯಾಗ್ರಹಿಯಾಗಿ ಗಾಣದಾಳ್ ನಾರಾಯಣಪ್ಪ ಅವರು ಗೊಲ್ಯಾಣಾ ಬಳಿ ಸತ್ಯಾಗ್ರಹ ಹೂಡಿ ಬಂಧಿತರಾದರು. ಅವರಿಗೆ 9 ತಿಂಗಳು ಕಠಿಣ ಶಿಕ್ಷೆ ವಿಧಿಸಲಾಯಿತು. ಅವರೊಡನೆ ಹಲವು ವಿದ್ಯಾರ್ಥಿಗಳೂ ಸತ್ಯಾಗ್ರಹ ನಡೆಸಿ ಬಂಧಿತರಾದರು.

'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ' ಚಳುವಳಿ ಯಶಸ್ವಿಯಾಗಿ ನಡೆದುದರ ಪರಿಣಾಮವಾಗಿ 1947ನೇ ಆಗಸ್ಟ್ 9ರ ದಿನ ಭಾರತಕ್ಕೆ ಸ್ವಾತಂತ್ರ್ಯವನ್ನು ನೀಡಿ, ಬ್ರಿಟಿಷರು ಭಾರತದಿಂದ ಕಾಲ್ತೆಗೆದರು.

1942ರ ಚಳುವಳಿಯಲ್ಲಿ ಡಾ॥ ಬಿ.ಜಿ. ದೇಶಪಾಂಡೆ, ರಾಮಾಚಾರ್, ವೆಂಕೋಬರಾವ್, ನಾರಾಯಣಪ್ಪ, ರಾಯಚೂರಿನ ಗುಡಿಹಾಳ ಹನುಮಂತರಾಯರು, ಜಿ. ಮದ್ದರಾಯರು, ಗುಲ್ಬರ್ಗಾದ ಕೊಲ್ಲೂರು ಮಲ್ಲಪ್ಪ, ಜಗನ್ನಾಥರಾವ್ ಚಂಡರಕಿ, ದತ್ತಾತ್ರೇಯರಾವ್, ಬೀದರ್‌ನ ಮುರಳೀಧರರಾವ್, ರಂಗನಾಥ್‌ರಾವ್ ಇವರದು ಪ್ರಮುಖ ಪಾತ್ರ

ಕೊಪ್ಪಳ ಭಾಗದಲ್ಲಿ 1942ರ ಚಳುವಳಿಗೆ ಚೇತನಕೊಟ್ಟವರು ಜಿ. ಕೆ. ಪ್ರಾಣೇಶಾಚಾರ್ ಮತ್ತು ಶ್ಯಾಮ್‌ಸುಂದರ್ ಈ ಚಳುವಳಿಯಲ್ಲಿ ಯಲಬುರ್ಗಿ ಮತ್ತು ಕೊಪ್ಪಳ ತಾಲ್ಲೂಕಿನಿಂದಲೇ ಸುಮಾರು 120ಕ್ಕೂ ಹೆಚ್ಚು ಜನ ಸತ್ಯಾಗ್ರಹದಲ್ಲಿ ಭಾಗವಹಿಸಿ ಸೆರಮನೆ ಕಂಡರು.

ದೇಶೀಯ ಸಂಸ್ಥಾನಗಳ ಪೈಕಿ ಮೈಸೂರು ಮತ್ತು ಹೈದರಾಬಾದು ಭಾರತದೊಡನೆ ಸೇರ್ಪಡೆಯಾಗಲು ಹಿಂದುಮುಂದು ನೋಡಿದವು. ಮೈಸೂರಿನಲ್ಲಿ 1947ರಲ್ಲಿ ಮೈಸೂರು ಚಲೋ ಸತ್ಯಾಗ್ರಹ ನಡೆದು ಕೊನೆಗೆ ಅರ್ಕಾಟ್ ರಾಮಸ್ವಾಮಿ ಮೊದಲಿಯಾರರ ಸರ್ಕಾರ ತನ್ನ ಸೋಲನ್ನೊಪ್ಪಿಕೊಂಡಿತು. ಈ ಹೋರಾಟದಲ್ಲಿ 'ಪೌರವಾಣಿ' ಪತ್ರಿಕೆ

ಮತ್ತು ಕಾಂಗ್ರೆಸ್ಸಿನ ಪ್ರಗತಿಪಕ್ಷದ ಸದಸ್ಯರದು ಅತಿ ದೊಡ್ಡ ಪಾತ್ರ.

ಪೌರವಾಣಿ ಪತ್ರಿಕೆಯನ್ನು ಸರ್ಕಾರ ಈ ಮೊದಲೇ ಮುಟ್ಟುಗೋಲು ಹಾಕಿಕೊಂಡಿದ್ದರಿಂದ, ಪತ್ರಿಕೆಯನ್ನು ಹಿಂದೂಪುರದಿಂದ ಅದರ ಸಂಪಾದಕರಾದ ಎಚ್. ಎಸ್. ದೊರೆಸ್ವಾಮಿ ಸೇವಾಮಂದಿರದ ಎಂ. ಲಿಂಗಣ್ಣನವರ ಸಹಕಾರದಿಂದ ಆರಂಭಿಸಿದರು. ಎಸ್. ಎಸ್. ಶಾಸ್ತ್ರಿ, ಕೆ. ಆರ್. ಶ್ರೀಧರಮೂರ್ತಿ, ರುಮಾಲೆ ಚೆನ್ನಬಸವಯ್ಯ, ತಿರುಮಲೆ ಶ್ರೀರಂಗ, ಸೂರ್ಯನಾರಾಯಣ, ಕೆ. ಎಲ್. ಶರ್ಮಾ ಮೈಸೂರಿನ ಸುಬ್ಬರಾಮಯ್ಯ ಇವರುಗಳೂ ಹಿಂದೂಪುರಕ್ಕೆ ಬಂದಿಳಿದರು.

ಪತ್ರಿಕೆ 38 ದಿನಗಳ ಕಾಲ ಅವ್ಯಾಹತವಾಗಿ ನಡೆಯಿತು. ಸತ್ಯಾಗ್ರಹದ ಸುದ್ದಿ ಹೊತ್ತ ಪತ್ರಿಕೆ ಮೈಸೂರು ಸಂಸ್ಥಾನದ ಜನತೆಯನ್ನು ಬಡಿದೆಬ್ಬಿಸಿತು.

ಪತ್ರಿಕೆಯ ಜೊತೆ ಜೊತೆಗೆ ಗಡಿ ಕಾರ್ಯಾಚರಣೆಯನ್ನೂ ಕೆ. ಆರ್. ಶ್ರೀಧರಮೂರ್ತಿ ಅವರ ನೇತೃತ್ವದಲ್ಲಿ ಆರಂಭಿಸಲಾಯಿತು. ಈ ಕಾರ್ಯದಲ್ಲಿ ತುಮಕೂರಿನ ಮುದ್ದಪ್ಪ ಮಾಣಿಕ್ ಹಳ್ಳಿಯ 'ನ್ಯಾತತಿಮ್ಮಾರೆಡ್ಡಿ, ಬರಗೂರು ರಾಮೇಗೌಡ, ಕೆ. ಎಲ್. ಶರ್ಮ, ಮೇಳ್ಯದ ಪಿ. ಓ. ನಾರಾಯಣಾಚಾರಿ ಮುಂತಾದವರು ಹುರುಪಿನಿಂದ ಕೂಡಿಕೊಂಡರು.

ಆಜಾದ್ ಮೈಸೂರು ಸರ್ಕಾರದ ಘೋಷಣೆ ಮಾಡಲಾಯಿತು. ಪ್ರತಿ ಸರ್ಕಾರ ರಚಿಸಲಾಯಿತು. ಮಹಾರಾಜರ ಸರಕಾರದೊಡನೆ ಅಸಹಕಾರ ಮಾಡುವ ಪ್ರಸಿದ್ಧ ಪತ್ರಿಕೆ ಹೊರಡಿಸಲಾಯಿತು. ಶ್ಯಾನುಭೋಗರು ತಮ್ಮ ದಫ್ತರಗಳನ್ನು ಸರ್ಕಾರಕ್ಕೆ ಹಿಂದಿರುಗಿಸಿ ತಮ್ಮ ನಿಷ್ಠೆ ಇನ್ನು ಮುಂದೆ ಪ್ರತಿಸರ್ಕಾರಕ್ಕೆ ಎಂದು ಘೋಷಣೆ ಮಾಡಿದರು.

ಶಿರಾ ತಾಲ್ಲೂಕಿನ ಕಳ್ಳಂಬೆಳ್ಳ ಹಾಗೂ ಕಸಬಾ ಹೋಬಳಿಯ ಅನೇಕ ಗ್ರಾಮಾಧಿಕಾರಿಗಳೂ ಬುಕ್ಕಾ ಪಟ್ಟಣ ಹೋಬಳಿಯ 79 ಗ್ರಾಮಾಧಿಕಾರಿಗಳೂ ಪ್ರತ್ಯೇಕವಾಗಿ ತಮ್ಮ ಹಸ್ತಾಕ್ಷರವುಳ್ಳ ಘೋಷಣಾ ಪತ್ರಗಳನ್ನು ಸರ್ಕಾರಕ್ಕೆ ಕಳಿಸಿದರು. ಖಾತೆ ಕಿರ್ದಿಗಳನ್ನೂ ಸರ್ಕಾರಕ್ಕೆ

ವಾಪಸ್‌ಮಾಡಿದರು. ಸಹಸ್ರಾರು ಗ್ರಾಮವಾಸಿಗಳು ಸತ್ಯಾಗ್ರಹಿಗಳಾಗಲು ದೀಕ್ಷೆ ಕೈಗೊಂಡರು.

ಜನರ ಪ್ರತಿಭಟನೆಯನ್ನು ಎದುರಿಸಲಾರದ ಸರ್ಕಾರ, ಐದೇ ವಾರಗಳಲ್ಲಿ ಕಾಂಗ್ರೆಸ್ಸಿನ ಎಲ್ಲ ಬೇಡಿಕೆಗಳನ್ನೂ ಪೂರೈಸುವುದಾಗಿ ಘೋಷಣೆ ಹೊರಡಿಸಿತು.

ಮೈಸೂರು ಕಾಂಗ್ರೆಸ್ಸಿನ ದಿಟ್ಟ ಹೋರಾಟದ ಫಲವಾಗಿ ಹಾಗೂ ಜನರ ತ್ಯಾಗ ಬಲಿದಾನಗಳ ಫಲವಾಗಿ ಕೊನೆಗೂ ಮೈಸೂರು ಸಂಸ್ಥಾನದಲ್ಲಿ ಸಂಪೂರ್ಣ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಯಿತು.

1947ರ ಚಳುವಳಿಯ ಮುಖಂಡತ್ವವು ಕನ್ನಡಿಗರಾದ ಸ್ವಾಮಿ ರಮಾನಂದ ತೀರ್ಥರದೇ ಆಗಿತ್ತು. ಹೈದರಾಬಾದ್ ಸಂಸ್ಥಾನದಲ್ಲಿ ರಜಾಕರರ ಹಾವಳಿ ಬಲವಾಯಿತು. ರಜಾಕರರು ಹಿಂದುಗಳನ್ನು ಭಯೋತ್ಪಾದನೆ ಮಾಡಿ ತೊಂದರೆಗೀಡುಮಾಡುತ್ತಿದ್ದರು. ಹೈದರಾಬಾದಿನಲ್ಲಿ ಒಮ್ಮೆ ಪ್ರಯಾಣಿಕರ ಬಸ್ಸೊಂದನ್ನು ತಡೆಹಿಡಿದು ಒಳಗಿದ್ದ 8 ಮಂದಿಯನ್ನು ಇರಿದು ಕೊಂದರು. ರಾಯಚೂರಿನಲ್ಲಿ ಸಾವಿರಾರು ಬಡಜನರ ಗುಡಿಸಲುಗಳಿಗೆ ಬೆಂಕಿ ಹಚ್ಚಿದರು. ಗ್ರಾಮಾಂತರ ಪ್ರದೇಶಗಳಲ್ಲೂ ಅನೇಕ ಮನೆಗಳನ್ನು ಲೂಟಿ ಮಾಡಿ, ಹೆಣ್ಣು ಮಕ್ಕಳ ಶೀಲಭಂಗಮಾಡಿ, ಆಭರಣಗಳನ್ನು ದೋಚಿದರು. 1947ರ ಜುಲೈನಲ್ಲಿ ಜಿ. ರಾಮಾಚಾರ್ಯರು ರಜಾಕರರ ಅತ್ಯಾಚಾರದ ಬಗೆಗೆ ಆಗಿನ ಪ್ರಧಾನ ಮಂತ್ರಿ ಮೀರ್ ಲಾಯಖ್‌ಅಲಿ ಅವರಿಗೆ ದೂರಿತ್ತರು. ಅದರಿಂದ ಯಾವುದೇ ಪರಿಹಾರ ದೊರೆಯಲಿಲ್ಲವಾಗಿ 1947ನೇ ಅಕ್ಟೋಬರ್ 15ರಂದು ರಾಯಚೂರು, ಗುಲ್ಬರ್ಗಾ, ಬೀದರ್ ಜಿಲ್ಲೆಗಳಲ್ಲಿ ಸತ್ಯಾಗ್ರಹವನ್ನು ಆರಂಭಿಸಲಾಯಿತು. ರಾಯಚೂರಿನ ಜಿ. ಮಧ್ವರಾಯರ ದಸ್ತಗಿರಿ ಆಗಿ ಅವರ ವಿಚಾರಣೆ ಜೈಲಿನಲ್ಲೇ ನಡೆದು ಅವರಿಗೆ ಹತ್ತುವರೆ ತಿಂಗಳ ಶಿಕ್ಷೆ ವಿಧಿಸಲಾಯ್ತು. ರಜಾಕರರು ಮಧ್ವರಾಯರ ಮನೆಗೆ ಬೆಂಕಿ ಹಚ್ಚಿದರು.

ರಜಾಕರರ ವಿರುದ್ಧ ಹೋರಾಡಲು ಯುವಕರ ಒಂದು ತಂಡವನ್ನು ಕಟ್ಟಲಾಯಿತು. ಅವರಿಗೆ ಸರದಿಯ ಮೇಲೆ ವಿಜಯವಾಡದಲ್ಲಿ 20 ದಿನಗಳ ರೈಫಲ್ ಶಿಕ್ಷಣ ಕೊಡಲಾಯಿತು.

1947ನೇ ಜುಲೈ ಕೊನೆಯಲ್ಲಿ ಸ್ಟೇಟ್ ಕಾಂಗ್ರೆಸ್ಸಿನ ಕಾರ್ಯಕಾರಿ ಸಮಿತಿ ಹೈದರಾಬಾದಿನಲ್ಲಿ ಸಭೆ ಸೇರಿ ಆಗಸ್ಟ್ 7ರಂದು 'ಹಿಂದೀ ಒಕ್ಕೂಟ ದಿನ'ವನ್ನು ಆಚರಿಸಲು ನಿರ್ಧರಿಸಿತು. ಸರ್ಕಾರದ ನಿಷೇಧ ಆಜ್ಞೆಗಳನ್ನು ಪ್ರಭಾತಫೇರಿ, ಮೆರವಣಿಗೆ, ಸಾರ್ವಜನಿಕ ಸಭೆ ನಡೆಸುವುದರ ಮುಖಾಂತರ ಮುರಿಯುವುದೆಂದು ಗೊತ್ತುಪಡಿಸಲಾಯಿತು. ಈ ದಿನಾಚರಣೆಯನ್ನು ಹೈದರಾಬಾದ್ ಸಂಸ್ಥಾನದಾದ್ಯಂತ 345 ಕಡೆಗಳಲ್ಲಿ ಆಚರಿಸಲಾಯ್ತು. ಆಗಸ್ಟ್ 7ರೊಳಗೆ 180ಕ್ಕೂ ಹೆಚ್ಚು ಜನರ ಬಂಧನವಾಯಿತು. ಖಮ್ಮಮ್, ಔರಂಗಾಬಾದ್, ಮಂಥಣಿಗಳಲ್ಲಿ ಲಾಠಿಚಾರ್ಜ್ ಆಯಿತು. ಜನಾರ್ಧನ ದೇಸಾಯಿ ಅವರ ಮೇಲೆ ಅರೆಸ್ಟ್ ವಾರೆಂಟ್ ಇದ್ದು ಅವರು ಗದುಗಿಗೆ ಹೋಗಿ ಅದನ್ನು ತಮ್ಮ ಕಾರ್ಯಾಚರಣೆಯ ಕೇಂದ್ರ ಮಾಡಿಕೊಂಡರು. ಅಲ್ಲಿ ಅವರು ರಜಾಕರರನ್ನು ಎದುರಿಸಲು ಸಿದ್ಧತೆಗಳನ್ನು ಮಾಡಿದರು. ನಾಗಪುರದಲ್ಲಿ ಮಹಾರಾಷ್ಟ್ರದ ಶಿಬಿರ, ವಿಜಯವಾಡದಲ್ಲಿ ಆಂಧ್ರದ ಶಿಬಿರ ಈಗಾಗಲೇ ಅಸ್ತಿತ್ವಕ್ಕೆ ಬಂದಿತ್ತು. ಬುರ್ಲಿ ಬಿಂದುಮಾಧವರು, ಜನಾರ್ದನ ದೇಸಾಯರು ನೆರವಿಗೆ ಬಂದರು. ಸುಮಾರು 10 ತಿಂಗಳು ಈ ಮೂರೂ ಶಿಬಿರಗಳು ನಡೆದವು. ಜನತೆಯ ಈ ಹೋರಾಟವನ್ನು ಕುರಿತು ಗಾಂಧೀಜಿಯವರು 'ಹಿಂದೂಸ್ಥಾನದ ಸ್ವಾತಂತ್ರ್ಯ ಸಂಗ್ರಾಮದ ಕೊನೆಯ ಸಮರ ಹೈದರಾಬಾದಿನಲ್ಲಿ ನಡೆದಿದೆ' ಎಂದು ಉದ್ಗಾರ ತೆಗೆದರೆಂದರೆ ಆ ಸಂಘಟನೆ ಹೇಗಿದ್ದಿರಬಹುದು ಎಂಬುದನ್ನು ಊಹಿಸಬಹುದು.

ಪ್ರತಿಯೊಂದು ಶಿಬಿರದಲ್ಲಿಯೂ ಸೈನಿಕ ತರಬೇತಿ ಹೊಂದಿದ ಯುವಕರ ತಂಡ ಇತ್ತು. ಈ ಯುವಕರು ರಜಾಕರರ ಹಾವಳಿಯನ್ನು

ಸಮರ್ಥವಾಗಿ ಎದುರಿಸುತ್ತಿದ್ದರು. ಕೆಲವು ಬಾರಿ ಅವರನ್ನು ಅಟ್ಟಿಸಿಕೊಂಡು ಹೋಗಿ ಅವರ ಬಳಿಯಿದ್ದ ಆಯುಧಗಳನ್ನೂ ಮದ್ದುಗುಂಡುಗಳನ್ನೂ, ಕಸಿದುಕೊಂಡು ಬರುತ್ತಿದ್ದರು.

ನಿಜಾಮರ ಸಹಾಯ ಒಂದು ಕಡೆ, ಅರಬ್ ಸೈನಿಕರ ಬೆಂಬಲ ಇನ್ನೊಂದು ಕಡೆ, ಹಣ, ಮದ್ದು ಗುಂಡುಗಳ ಸರಬರಾಜು ರಜಾಕರರಿಗೆ ಯಥೇಚ್ಛವಾಗಿ ಆಗುತ್ತಿತ್ತು. ಜನತಾ ಶಿಬಿರಕ್ಕೆ ಮೈಸೂರು, ಮದರಾಸಿನ ಮಹಾಜನರು ಮುಕ್ತ ಹಸ್ತದಿಂದ ಧನಸಹಾಯ ಮಾಡಿದರು.

ನಿಜಾಂ ಸರ್ಕಾರವಾದರೋ ರಜಾಕರರನ್ನು ಎತ್ತಿಕಟ್ಟಿ ಕಾಂಗ್ರೆಸ್ಸಿಗರನ್ನೂ ಪ್ರಜಾಕೋಟಿಯನ್ನೂ ದಮನಮಾಡಲು ತೊಡಗಿತು. ರಜಾಕರರು ಹೈದರಾಬಾದ್ ಸಂಸ್ಥಾನದ ಎಲ್ಲೆಗಳನ್ನು ಅತಿಕ್ರಮಿಸಿ ಇಂಡಿಯನ್ ಯೂನಿಯನ್ನಿನ ಭಾಗಗಳನ್ನು ಆಕ್ರಮಿಸಿಕೊಳ್ಳಲು ತೊಡಗಿದರು. ಆಗ ದೇಶದಾದ್ಯಂತ ಇದ್ದ ಕಾಂಗ್ರೆಸ್ ಕಾರ್ಯಕರ್ತರು ರಜಾಕರರ ಈ ಧಾಳಿಯನ್ನು ತಡೆಯಲು ಸರ್ವಪ್ರಯತ್ನ ಮಾಡಿದರು. ಜನಾರ್ಧನರಾವ್ ದೇಸಾಯ್ ಗದಗನ್ನು ಕೇಂದ್ರವಾಗಿ ಮಾಡಿಕೊಂಡು ಗಡಿಯ ಹೋರಾಟವನ್ನು ಆರಂಭಿಸಿದರು. ಕರ್ನಾಟಕದ ನಾಯಕರು ಇವರಿಗೆ ಸಂಪೂರ್ಣ ಸಹಕಾರ ಇತ್ತರು. ಕಡೆಗೆ ಭಾರತ ಸರ್ಕಾರ 1948ನೇ ಸೆಪ್ಟೆಂಬರ್ 13ರಂದು ಪೊಲೀಸ್ ಕಾರ್ಯಾಚರಣೆ ಕೈಗೊಂಡು ರಜಾಕರರನ್ನು ಸಂಪೂರ್ಣವಾಗಿ ಪರಾಭವಗೊಳಿಸಿ ನಿಜಾಮರು ಭಾರತ ಸರ್ಕಾರದೊಡನೆ ಗೌರವಯುತ ಒಪ್ಪಂದಕ್ಕೆ ಬರುವಂತೆ ಮಾಡಿತು. ಹೀಗೆ ಕರ್ನಾಟಕ ಸ್ವಾತಂತ್ರ್ಯ ಹೋರಾಟ ದಿಟ್ಟತನದಿಂದ ನಡೆಸಿದ ಕಾರಣದಿಂದ ಸಂಪೂರ್ಣ ಸ್ವಾತಂತ್ರ್ಯ ನಮಗೆ ಲಭಿಸಿತು.

# ಸ್ವಾತಂತ್ರ್ಯ ಹೋರಾಟದಲ್ಲಿ ಜನಸಾಮಾನ್ಯರ ಪಾತ್ರ

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಜನ ಸಾಮಾನ್ಯರದು ಪ್ರಧಾನ ಪಾತ್ರ ಗಾಂಧೀಜಿ ಅವರ ನೇತೃತ್ವದಲ್ಲಿ ನಡೆದ ಈ ಜನಪರ ಹೋರಾಟಗಳಲ್ಲಿ (1920ರಿಂದ 1942) ಶ್ರೀಸಾಮಾನ್ಯನ ಪಾತ್ರ ಅಮೋಘವಾದದ್ದು. ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯ ಸಿರಸಿ, ಸಿದ್ದಾಪುರ, ಕುಮುಟಾ ಮತ್ತು ಅಂಕೋಲಾಗಳಲ್ಲಿ ನಡೆದ ಕರನಿರಾಕರಣ ಚಳುವಳಿ, ಅರಣ್ಯ ಸತ್ಯಾಗ್ರಹಗಳಲ್ಲಿ (1930–32) ಭಾಗವಹಿಸಿದ ಸಾಮಾನ್ಯ ಸ್ವಾತಂತ್ರ್ಯ ಯೋಧರ ಧೈರ್ಯ ಸಾಹಸಗಳ ಹಾಗೂ ತ್ಯಾಗ ಬಲಿದಾನಗಳ ಸ್ಯಾಂಪಲ್‌ಗಳನ್ನು ಇಲ್ಲಿ ನೀಡಲಾಗಿದೆ. ಈ ಹೃದಯವಿದ್ರಾವಕ ಸಂಗತಿಗಳನ್ನು ಅವಲೋಕಿಸಿದಲ್ಲಿ ಇಡೀ ಭಾರತದಲ್ಲಿ ಜನಸಾಮಾನ್ಯರು ಸ್ವಾತಂತ್ರ್ಯ ಪ್ರಾಪ್ತಿಗಾಗಿ ಏನೆಲ್ಲ ಸಾಹಸ ಮಾಡಿರಬಹುದೆಂಬ ಚಿತ್ರಣ ಸಹಜವಾಗಿ ನಮ್ಮ ಕಣ್ಣ ಮುಂದೆ ಸುಳಿದಾವು.

ದಿ.19–08–1931ರಲ್ಲಿ ಅಂಕೋಲಾದಲ್ಲಿ ಜಂಗಲ್ ಕಾಯಿದೆಭಂಗ ಚಳುವಳಿಯಲ್ಲಿ 9 ಜನರನ್ನು ಬಂಧಿಸಲಾಯಿತು. ಸಿರ್ಸಿ ತಾಲ್ಲೂಕು ಹಾರ್ಸಿಕಟ್ಟೆಯಲ್ಲಿ ಜಂಗಲ್ ಕಾನೂನು ಭಂಗ ಮಾಡಿದ್ದಕ್ಕಾಗಿ ಬೀರಣ್ಣ ತಿಮ್ಮಣ್ಣನಾಯ್ಕ, ವಿ. ಕೆ. ನಾಯ್ಕ, 10 ವಯಸ್ಸಿನ ಕಮಲಾಕರ್, ನಾರ್ಲೇಕರ್, ಎಂ. ಜೆ. ಪಾಲೇಕರ್ ಶೆಣ್ಯೆ ಈ ಐವರನ್ನು ಖೈದು ಮಾಡಲಾಯಿತು.

ಜಂಗಲ್ ಸತ್ಯಾಗ್ರಹದಲ್ಲಿ ಇಳಸೂರು, ದೊಂಬೇಸರದಲ್ಲಿ 100 ಮಂದಿ ತಾರಗೋಡ್‌ದಲ್ಲಿ 200 ಗಂಡಸರು 50 ಸ್ತ್ರೀಯರು ಸೋದಾದಲ್ಲಿ 150 ಗಂಡಸರು 25 ಸ್ತ್ರೀಯರು, ದಾಸನಕೊಪ್ಪದಲ್ಲಿ 75 ಗಂಡಸರು ಕದಕಿನ ಬೈಲ್‌ನಲ್ಲಿ 200 ಗಂಡಸರು, 25 ಸ್ತ್ರೀಯರು, ಬನವಾಸಿಯಲ್ಲಿ 50 ಗಂಡಸರು 7 ಸ್ತ್ರೀಯರು ಬಂಧಿತರಾದರು.

ಸಿರ್ಸಿ ತಾಲ್ಲೂಕಿನ ಹುಲ್ಲುಬನ್ನಿ ಸತ್ಯಾಗ್ರಹದಲ್ಲಿ ತೊಡಗಿದ್ದ ಕೃಷ್ಣಾಭಟ್ಟ ಸುಬ್ರಾಯಭಟ್ಟ, ಗಣಪತಿಭಟ್ಟ, ಕೃಷ್ಣಭಟ್ಟ, ಲಕ್ಷ್ಮಣ ವೆಂಕಭಟ್ಟ, ಜಗನ್ನಾಥ್ ಹೀಗೆ 5 ಮಂದಿಯನ್ನು ಪೋಲೀಸರು ಬಂಧಿಸಿದರು.

ಸಿರ್ಸಿ ತಾಲ್ಲೂಕಿನ 42 ಪಟೇಲರು ಸಿದ್ಧಾಪುರ ತಾಲ್ಲೂಕಿನ 35 ಪಟೇಲರು, ಅಂಕೋಲೆಯ 21 ಪಟೇಲರು ತಮ್ಮ ಹುದ್ದೆಗೆ ರಾಜಿನಾಮೆ ಕೊಟ್ಟು ಸತ್ಯಾಗ್ರಹದಲ್ಲಿ ತೊಡಗಿಕೊಂಡರು.

ಅಂಕೋಲೆಯಲ್ಲಿ ದಿ.24-10-1931ರಂದು ಸಾರಾಯಿ ಅಂಗಡಿ ಬಂದ್ ಮಾಡಿಸಿದ್ದಕ್ಕಾಗಿ ಲಕ್ಷ್ಮೇಶ್ವರ ಮತ್ತು ಕಾಕಳೆಯವರನ್ನು ಮತ್ತು ನಾಯಕ ಹೆಗಡೆ, ವಹಿಯಾರ ನಾರ್ವೇರ ಅವರನ್ನು ಖೈದು ಮಾಡಲಾಯಿತು.

ಬಿ.ಎ. ಪದವೀಧರರೂ, ವಿದೇಶಿ ವಸ್ತ್ರ ಮಾರಾಟಗಾರರೂ ಆದ ಎ.ಎ. ಶಾಂ ಎಂಬುವರು ಅಂಗಡಿಯನ್ನು ಮುಚ್ಚಿ ಸತ್ಯಾಗ್ರಹದಲ್ಲಿ ಕೂಡಿಕೊಂಡರು. ಸಿದ್ದಾಪುರದಲ್ಲಿ ಹಲಗೇರಿ ರಾಮಯ್ಯ ಹೆಗಡೆ, ರಾಮಸ್ವಾಮಿ, ಮಹಾಬಲೇಶ್ವರ, ರಾಮಯ್ಯ ಇಗ್ಗಪ್ಪ ಹೆಗಡೆ, ತಿಮ್ಮಯ್ಯ ಸುಬ್ಬಯ್ಯ ಹೆಗಡೆ ಇವರಿಗೆಲ್ಲ 30-10-1931ರಂದು ತಲಾ ಒಂದು ತಿಂಗಳ ಶಿಕ್ಷೆ ವಿಧಿಸಲಾಯಿತು.

ಸಿರ್ಸಿಯಲ್ಲಿ ದಿ. 12-10-1931ರಂದು ಕಾಯ್ದೆ ಭಂಗ ಕಾಯ್ದೆಯಡಿ ಬಂಧಿಸಲ್ಪಟ್ಟ ಶ್ರೀನಿವಾಸ ಬಾಬಯ್ಯ ಪಂಡಿತ ಅವರಿಗೆ 3 ತಿಂಗಳು ಸೆರೆಮನೆವಾಸ ಮತ್ತು 25 ರೂ. ಜುಲ್ಮಾನೆ, ಜುಲ್ಮಾನೆ ಕೊಡಲಿಲ್ಲವಾದರೆ ಮತ್ತೊಂದು ತಿಂಗಳು ಸೆರಮನೆವಾಸ, ಗೋಪಾಲ ವರದರಾಜಭಟ್ಟ ಅವರಿಗೆ 5 ತಿಂಗಳು ಶಿಕ್ಷೆ, 13 ವರ್ಷ ವಯಸ್ಸಿನ ದತ್ತಾತ್ರೇಯ ಶೇಷಗಿರಿ ಪಂಡಿತ ಅವರಿಗೆ 3 ತಿಂಗಳು ಶಿಕ್ಷೆ ವಿಧಿಸಲಾಯಿತು.

ಮುಂಡಿಗೇಸರ ಕೇಂದ್ರಕ್ಕೆ ಸೇರಿದ ಕಬ್ಬಿಗಾರ ಬೆಲ್ಲಕೊಪ್ಪದ, ಗೋವಿಂದ ಗಣಪತಿಭಟ್ಟ ಇವರು ಕೊಡಬೇಕಾದ ಎರಡು ವರ್ಷದ

ಹುಲ್ಲುಬನ್ನಿಯ ಬಾಕಿಗಾಗಿ ದಿ.10-01-1932 ರಂದು 10ರೂ. ಬೆಲೆಯ ಒಂದು ಗಡಿಯಾರ $2^1/_2$ ರೂ. ಬೆಲೆಯ ಒಂದು ಟ್ರಂಕನ್ನೂ ಜಪ್ತಿ ಮಾಡಿದ್ದಾರೆ. ಶಿರಸಿ ತಾಲ್ಲೂಕು ಸುಗಾವಿಯಲ್ಲಿ ಲಕ್ಷ್ಮಣ ಶಂಕರಭಟ್ಟ ಇವರು ಕೊಡಬೇಕಾಗಿದ್ದ ಹುಲ್ಲುಬನ್ನಿ ಎಂಟಾಣೆಯ ಬಾಕಿಗಾಗಿ ಮನೆ ಜಫ್ತಾಯಿತು. ತಾಮ್ರದ ತಟ್ಟೆ ಒಂದು ಅದರ ಕಿಮ್ಮತ್ತು 2 ರೂಪಾಯಿ, ಹಿತ್ತಾಳೆ ತಂಬಿಗೆ ಕಿಮ್ಮತ್ತು 5 ಆಣೆ, ಮೂರಾಣೆ ಬೆಲೆಯ ಮತ್ತೊಂದು ತಂಬಿಗೆ ಹೀಗೆ $2^1/_2$ ರೂ. ಬೆಲೆಬಾಳುವ ವಸ್ತುಗಳ ಜಫ್ತು ಆಗಿದೆ.

ಸುಬ್ಬಯ್ಯ ನಾಗಭಟ್ಟ ಅವರ ಬಾಕಿಗಾಗಿ 2 ರೂ. ಕಿಮ್ಮತ್ತಿನ ತಾಮ್ರದ ಕೊಳದಪ್ಪಲೆ, 12 ಆಣೆ ಬೆಲೆಯ ಹಿತ್ತಾಳೆ ಚರಿಗೆ, 4 ಆಣೆ ಕಿಮ್ಮತ್ತಿನ ಹಿತ್ತಾಳೆ ತಂಬಿಗೆ, ಹೀಗೆ 3 ರೂ. ಬೆಲೆಯ ಪಾತ್ರೆ ಜಫ್ತ್ ಮಾಡಲಾಗಿದೆ.

11 ಜನವರಿ 32ರಂದು ಸಿರ್ಸಿ, ಸಿದ್ದಾಪುರಗಳಲ್ಲಿ ಜಂಗಲ್ ಕಾಯಿದೆ ಮುರಿದದ್ದಕ್ಕೆ ಭಾನಿ ಮತ್ತು ಇಸಳೂರಿನ 6 ಮಂದಿಗೆ ಶಿಕ್ಷೆ ವಿಧಿಸಲಾಯಿತು. ಹೆಗಡೆಕಟ್ಟೆ ಕೇಂದ್ರದಲ್ಲಿ 50 ಮಂದಿ ಜಂಗಲ್ ಕಾಯ್ದೆ ಮುರಿದರು. ನಾವಿಲ್‌ಗಾರ್ ಭೈರಭಟ್ಟರು, ಈಶ್ವರ ಮಂಜಪ್ಪ ಹೆಗಡೆ, ವಿಘ್ನೇಶ್ವರ ಸತ್ಯನಾರಾಯಣ ಹೆಗಡೆ ಇವರನ್ನು ಖೈದು ಮಾಡಲಾಯಿತು. ಇಸಳೂರು ಕೇಂದ್ರದಲ್ಲಿ ಗೋವಿಂದಭಟ್ಟ, ಫಾತೇಪುರ್ ಇವರನ್ನು ಬಂಧಿಸಲಾಯಿತು. 20ನೇ ತಾರೀಖು ಡಿವಿಜನಲ್ ಫಾರೆಸ್ಟ್ ಆಫೀಸರು ಹೆರೂರಿಗೆ ಹೋಗಿದ್ದರು. ರಾಷ್ಟ್ರಧ್ವಜ ಹಾರಿಸಿದವರನ್ನು ಪ್ರಶ್ನಿಸಿದರು. ರಾಷ್ಟ್ರಧ್ವಜವನ್ನು ತೆಗೆಸಲು ಹೋದಾಗ ಹೋಬಳಿ ಗಣಪತಿಭಟ್ಟರು ತಮ್ಮ ಪ್ರಾಣ ಹೋದರೂ ಸರಿಯೇ ರಾಷ್ಟ್ರಧ್ವಜವನ್ನು ತೆಗೆಯಗೊಡುವುದಿಲ್ಲವೆಂದು ಹೇಳಿದರು.

ಹಾರೂಗಾರ್ ಕೇಂದ್ರದಲ್ಲಿ ಕೊಡಿಗೆಗ್ರಾವ್ ಗಣಪತಿ ಸುಬ್ಬಯ್ಯಹೆಗಡೆ ಇವರ ಹುಲ್ಲುಬನ್ನಿ ಬಾಕಿ ಒಂದು ರೂಪಾಯಿ ಇದ್ದು ಅದಕ್ಕಾಗಿ 12 ಸೇರು ತೂಕದ ತಾಮ್ರದ ಚರಿಗೆಯನ್ನು ಜಪ್ತಿ ಮಾಡಿ

ಒಯ್ದಿದ್ದಾರೆ. ಸಿದ್ದಾಪುರ ತಾಲ್ಲೂಕು ಅಂಬಾಪುರದಲ್ಲಿ ದಿ.25-01-1931ರಂದು ಹುಲ್ಲುಬನ್ನಿ ಬಾಕಿಗಾಗಿ 5-6 ಕಡೆ ಜಪ್ತಿ ಮಾಡಿ ಹರಾಜಿಗೆ ಆ ಪದಾರ್ಥಗಳನ್ನು ಇಟ್ಟಿದ್ದರು. ಯಾರೂ ಹರಾಜಿನಲ್ಲಿ ಕೂಗಲಿಲ್ಲ. ಕೊನೆಗೆ ಈ ಪದಾರ್ಥಗಳನ್ನು ಕೋಡಿಗದ್ದೆ ಕೃಷ್ಣಸುಬ್ಬಾಭಟ್ಟ ಇವರ ಹೆಸರಿಗೆ ಹತ್ತು ರೂ. ಒಂದಾಣೆ ಹತ್ತು ಕಾಸಿಗೆ ಲಿಲಾವು ಮಾಡಿಕೊಡಲಾಯಿತು.

ಕಂದಾಯ ಕೊಡಲು ನಿರಾಕರಿಸಿದ ಅಂಕೋಲಾ ತಾಲ್ಲೂಕಿನ ಬೊಮ್ಮನಾಯ್ಕರ ಎರಡು ಎಮ್ಮೆ, ಒಂದು ಎಮ್ಮೆ ಕರು, ಪರಶುರಾಮ ಕೃಷ್ಣನಾಯ್ಕರ ಒಂದು ಎಮ್ಮೆ, ಎಮ್ಮೆಕರು, ವೆಂಕಣ್ಣ ಲಕ್ಷ್ಮಣ ನಾಯ್ಕರ ಒಂದು ಎಮ್ಮೆ, ಗೋವಿಂದ ವೆಂಕಣ್ಣ ನಾಯ್ಕರ ಎರಡು ಆಕಳು ಒಂದು ಕರು, ಮೋನಪ್ಪ ಬೀರಣ್ಣ ನಾಯ್ಕರ ಒಂದು ಎತ್ತಿನ ಜೋಡಿ, 200 ರೂ. ಕಿಮ್ಮತ್ತಿನ ಒಂದು ಗಾಡಿ ಜಫ್ತಾಗಿದೆ.

ಸಿದ್ದಾಪುರದಲ್ಲಿ ಪೋಲೀಸರು ಸತ್ಯಾಗ್ರಹದಲ್ಲಿ ಭಾಗವಹಿಸಿದ್ದ ಸ್ತ್ರೀಯರನ್ನು ಸಾಯುವಂತೆ ಬಡಿದರು, ಗುದ್ದಿದರು, ಕೋವಿಯಿಂದ ತಿವಿದರು. ಲಾಠಿಯಿಂದ ಬಳೆಗಳನ್ನು ಒಡೆದರು.

ಸಿದ್ದಾಪುರ ತಾಲ್ಲೂಕು ಅಕ್ಕಂಜಿಯಲ್ಲಿ ಲಿಲಾವಿನಲ್ಲಿ ಎಮ್ಮೆ ಕೊಂಡದ್ದಕ್ಕಾಗಿ ಗೌರಮ್ಮ, ಕಾವೇರಮ್ಮ, ಹಣಜಿಬೈಲ್ ದುಗ್ಗಮ್ಮ ಶೀರಳಗಿ ಭಾಗೀರತಮ್ಮ ದಿ.16-04-1932ರಂದು ಕೊಂಡವರ ಮನೆಯ ಮುಂದೆ ಸತ್ಯಾಗ್ರಹ ಆರಂಭಿಸಿದರು. ಮಾಲುಕೊಂಡವರಲ್ಲಿ ಒಬ್ಬರು ತಾನು ಹರಾಜಿನಲ್ಲಿ ಕೊಂಡಿದ್ದ ಎಮ್ಮೆಯನ್ನು ದಾನಪತ್ರ ಬರೆದು ಸತ್ಯಾಗ್ರಹಿಗಳಿಗೆ ಹಿಂದಿರುಗಿಸಿದನು. ಪೋಲೀಸರು ಎಮ್ಮೆಯನ್ನು ವಾಪಸ್ ಪಡೆಯುವಂತೆ ಕೊಂಡಿದ್ದವರನ್ನು ಬಲಾತ್ಕರಿಸಿದರು. ಖೈದು ಮಾಡುತ್ತೇವೆ, ಹೊಡೆಯುತ್ತೇವೆ ಎಂದು ಹೆದರಿಸಿದರು. ಆತ ನಾನು ಮಹಾತ್ಮ ಗಾಂಧಿಗೆ ಆ ಎಮ್ಮೆ ದಾನ ಮಾಡಿದ್ದೇನೆ. ಅದನ್ನು ಹಿಂದಕ್ಕೆ ಪಡೆಯುವುದಿಲ್ಲ. ನೀವು ಬೇಕಾದ್ದು ಮಾಡಿರಿ ಎಂದನು. ಇನ್ನೊಬ್ಬಾತ ತಾನು ಹರಾಜಿನಲ್ಲಿ ಕೊಂಡ

ಎಮ್ಮೆಯನ್ನು ಬೇರೊಬ್ಬರಿಗೆ ಮಾರಿಬಿಟ್ಟಿದ್ದ. ಅವನನ್ನು ಸತ್ಯಾಗ್ರಹಿಗಳು ಮಾರಿದ ಹಣ ಕೊಡು ಎಂದು ಗಂಟು ಬಿದ್ದರು. ಉಪವಾಸ ಹೂಡಿದರು. ಪೋಲೀಸರು ಸತ್ಯಾಗ್ರಹಿಗಳನ್ನು ಖೈದು ಮಾಡಿ ಸಿದ್ದಾಪುರ ಲಾಕಪ್ಪಿನಲ್ಲಿಟ್ಟಿದ್ದರು. ಪೋಲೀಸರು ಗೌರಮ್ಮನನ್ನು ನೀನು ಪಾಪಕರ್ಮಿ ಸತ್ಯಾಗ್ರಹಿ ಅಲ್ಲ ಎಂದರು. ಉಳಿದ ಸತ್ಯಾಗ್ರಹಿಗಳನ್ನು ಕುರಿತು ಹವೀಕ ಹೆಂಗಸರಿಗೆ ಮಾನ ಮರ್ಯಾದೆ ಇಲ್ಲ, ನೀವು ಘಟಿಂಗರು, ನೀಚರು ನಿಮ್ಮನ್ನು ಹೊಲೆಯರ ಕೈಲಿ ಮೆಟ್ಟಿನಿಂದ ಹೊಡೆಸಿ, ತುಳಿಸಿ ಹಾಕುತ್ತೇವೆ ಎಂದು ಗದರಿದರು. ಈ ವಿಷಯ ತಿಳಿದ ಸಿದ್ದಾಪುರದ ವರ್ತಕರು ಮಾರನೇ ದಿನ ಹರತಾಳ ಆಚರಿಸಿ ತಮ್ಮ ಅಂಗಡಿ ಮುಂಗಟ್ಟುಗಳನ್ನು ಬಂದ್ ಮಾಡಿದರು. ಅಂಗಡಿ ಮುಚ್ಚಿದರೆ,ಹರತಾಳಆಚರಿಸಿದರೆಆರ್ಡಿನೆನ್ಸ್‌ಹೊರಡಿಸಬೇಕಾಗುತ್ತದೆ. 1000 ರೂ. ದಂಡ ವಿಧಿಸಬೇಕಾಗುವುದು ಎಂದು ಅಧಿಕಾರಿಗಳು ಹೆದರಿಸಿ ನೋಡಿದರು. ಆದರೂ ಯಾರೂ ಅಂಗಡಿ ಬಾಗಿಲು ತೆರೆಯಲಿಲ್ಲ.

ದಿ.15-06-1932ರ ಕರಪತ್ರದಲ್ಲಿ ರೈತಬಾಂಧವರೇ ಅಂಜಬೇಡಿರಿ. ಯಾರ್‍ಯಾರು ಹರಾಜಿನಲ್ಲಿ ಜಮೀನು, ಎಮ್ಮೆ, ಹಸು, ಪಾತ್ರೆಗಳನ್ನು ಕೊಳ್ಳುತ್ತಾರೆಯೊ, ಕೊಳ್ಳಲಿ. ನಾವು ನಮ್ಮ ಮನೆಮಂದಿಯನ್ನೆಲ್ಲ ಕರೆದುಕೊಂಡು ಅವರ ಮನೆ ಮುಂದೆ ಸತ್ಯಾಗ್ರಹ ಮಾಡಿ ಪ್ರಾಣ ಅರ್ಪಿಸೋಣ. ಸಿದ್ದಾಪುರದ ಜಮೀನನ್ನೆಲ್ಲ ಅಣ್ಣಾಜಿಗೌಡರು, ದ್ಯಾವೇಗೌಡರು, ಮುದ್ದೀರೇಗೌಡರು ಹರಾಜಿನಲ್ಲಿ ಕೊಂಡು ಹಾಯಾಗಿ ಬದುಕಲಿ. ಯಾರೂ ಅಂಜತಕ್ಕದ್ದಲ್ಲ. ಮನೆ ಹೋಗಲಿ ಮಾರು ಹೋಗಲಿ, ಕಡೆಗೆ ಜೀವ ಹೋಗಲಿ ಮಹಾತ್ಮ ಗಾಂಧಿ ಅವರು ಸೆರೆಮನೆಯಿಂದ ಹೊರ ಬಂದು ಹೇಳುವವರೆಗೆ ಯಾರೂ ಒಂದು ಕಾಸು ಕರ ಕೊಡಬೇಡಿ ಎಂದು ಪ್ರಚುರಪಡಿಸಲಾಗಿತ್ತು. ಸಿರ್ಸಿ ತಾಲ್ಲೂಕು ಇಸಳೂರು ಸ್ವಾತಂತ್ರ್ಯದಿನದ ನಿಮಿತ್ತ ಆಚರಿಸಿದ ಜಂಗಲ್ ಕಾಯ್ದೆ ಭಂಗ ಮಾಡಿದ ಫತ್ತೇಪುರ್ ಅವರಿಗೆ 6 ತಿಂಗಳು ಸಕ್ರಮ ಶಿಕ್ಷೆ, 100 ರೂ. ದಂಡ ಇಲ್ಲವೇ ಒಂದು ತಿಂಗಳು ಶಿಕ್ಷೆ,

ಜಗನ್ನಾಥ ಲಕ್ಷ್ಮಣ ನಾಡಿಗ ಅವರಿಗೆ 4 ತಿಂಗಳು ಕಠಿಣ ಶಿಕ್ಷೆ, 100 ರೂ. ದಂಡ ಇಲ್ಲವೇ $1^1/_2$ ತಿಂಗಳು ಸೆರೆವಾಸ ವಿಧಿಸಲಾಯಿತು. ಗೋವರ್ಧನ್ ಎಂಬುವವರಿಗೆ 6 ತಿಂಗಳು ಸಶ್ರಮ ಶಿಕ್ಷೆ ವಿಧಿಸಲಾಯಿತು.

ಹೆಗಡೆಕಟ್ಟೆ ಕೇಂದ್ರದಲ್ಲಿ ಕಾಯಿದೆ ಭಂಗ ಮಾಡಿದ ಭೈರಭಟ್ಟರಿಗೆ 6 ತಿಂಗಳು ಸಶ್ರಮ ಶಿಕ್ಷೆ 100 ರೂ. ದಂಡ, ಇಲ್ಲವೇ ಒಂದು ತಿಂಗಳು ಕಾರಾಗೃಹ ಶಿಕ್ಷೆ. ಈಶ್ವರಮಂಜಪ್ಪ ಹೆಗ್ಡೆ ಅವರಿಗೆ 4 ತಿಂಗಳು ಕಠಿಣ ಸಜಾ, 100 ರೂ. ದಂಡ ಇಲ್ಲವೇ 1 ತಿಂಗಳು ಶಿಕ್ಷೆ.

ಸಿದ್ದಾಪುರ ತಾಲ್ಲೂಕು ಬಿಳಗಿಯಲ್ಲಿ ದಿ.26–01–32ರಂದು ಸ್ವಾತಂತ್ರ್ಯ ದಿನ ಆಚರಿಸಲಾಯಿತು. ಊರು ರಾಷ್ಟ್ರಧ್ವಜಗಳ ತೋರಣದಿಂದ ಶೃಂಗರಿಸಲ್ಪಟ್ಟಿತ್ತು. ಮಧ್ಯಾಹ್ನ 150 ಮಂದಿ ಮೆರವಣಿಗೆಯಲ್ಲಿ ಹೊರಟು ಗಂಧದ ಮರಗಳನ್ನು ಕಡಿದು ಕಾನೂನು ಭಂಗಮಾಡಿದರು. ಈ ಹೋರಾಟದಲ್ಲಿ 30 ಮಹಿಳೆಯರು ಭಾಗವಹಿಸಿದ್ದರು. ಗಂಧದ ತುಂಡುಗಳನ್ನು ಲಿಲಾವು ಮಾಡಲಾಯಿತು. ಅನೇಕರು ಕೊಂಡರು. ಇದೇ ರೀತಿ ಕರ್ಕಿ ಸವಲಿ ಕುಳಿಬೀಡು, ಕ್ಯಾದ್ಗಿ, ಬಿದರುಕಾನ, ಇಟಗಿ ಮುಂತಾದ ಕಡೆಗಳಲ್ಲಿ ಕಾಯಿದೆ ಭಂಗದ ಕಟಿಗೆ ಹರಾಜಾಯಿತು. ಸಿದ್ದಾಪುರ ತಾಲ್ಲೂಕು ಬಿಳಗಿಯಲ್ಲಿ ಹುಲ್ಲುಬನ್ನಿ ಬಾಕಿಗಾಗಿ ಸುಬ್ಬರಾವ್‌ಪೈ ಮಾಧವಕೃಷ್ಣಾಚಾರ್ಯ, ಹರಿರಾಮಕೃಷ್ಣ ರಾಜವೈದ್ಯ, ರಾಮಚಂದ್ರ ಸುಬ್ಬಯ್ಯ ಕೋಡಿಗದ್ದೆ, ಇವರ ಮನೆಗಳು ಜಫ್ತಾದವು. ಜಫ್ತಾದ ಪದಾರ್ಥಗಳ ಹರಾಜು 25ನೇ ತಾರೀಕು ಇತ್ತು. ಯಾರೂ ಹರಾಜಿನಲ್ಲಿ ಕೂಗಲಿಲ್ಲ.

ಸಿರ್ಸಿ ತಾಲ್ಲೂಕು ಹೆಗಡೆ ಕಟ್ಟೆ ಒಂದು ಕೇಂದ್ರದಲ್ಲಿ ಹುಲ್ಲುಬನ್ನಿ ಬಾಕಿಗಾಗಿ ನಾರ್ಣಪ್ಪ ಅಡ್ಡಿ ಅವರ ಬಾಕಿ ರೂ. 1.40 ಪೈಸೆಗಾಗಿ ಒಂದು ಹಂಡೆ ಮಹಾಬಲೇಶ್ವರ ಪರಮಯ್ಯ ಹೆಗಡೆ ಬಾಕಿ ಒಂದು ರೂಪಾಯಿಗಾಗಿ ಒಂದು ಹಂಡೆ ಜಫ್ತ್ ಮಾಡಿ ಈ ಎರಡು ಹಂಡೆಗಳನ್ನೂ ಐವತ್ತೈದು ರೂಪಾಯಿಗೆ ಹರಾಜು ಮಾಡಲಾಯಿತು. ದಿ.29–01–1932ರಂದು ಸಿರ್ಸಿ ತಾಲ್ಲೂಕು ಡೊಂಬೇಸರದಲ್ಲಿ

ಪೋಲೀಸರು ಶ್ಯಾನುಭೋಗರು ಕೂಡಿಕೊಂಡು ಹುಲ್ಲುಬನ್ನಿ ಬಾಕಿಗಾಗಿ ಜಫ್ತಿ ಕ್ರಮ ಜರುಗಿಸಿದರು. ವಿಶ್ವೇಶ್ವರ ಶಂಭುಭಟ್ಟರಿಂದ ಒಂದು ಹಂಡೆ, ಒಂದು ತಪ್ಪಲೆ, ಸುಬ್ರಾಯ ಶಂಭುಭಟ್ಟರ 2 ರೂ. 14 ಆಣೆ ಬಾಕಿಗಾಗಿ ಒಂದು ಹಂಡೆ, ಶಿವರಾಮ ಶೇಷಭಟ್ಟರಿಂದ 3 ತಪ್ಪಲೆ, ಒಂದು ಹಿತ್ತಾಳೆ ಬೋಗಣಿ, ಶಂಭುಲಿಂಗ ತಮ್ಮಣ್ಣಭಟ್ಟರ $4^1/_2$ ರೂ.ಗಳ ಬಾಕಿಗಾಗಿ ಒಂದು ಹಂಡೆ, ರಾಮಚಂದ್ರ ನಾಗೇಶಭಟ್ಟ ಅವರ $6^1/_2$ ರೂ. ಬಾಕಿಗಾಗಿ ಒಂದು ಹಂಡೆ ಒಂದು ತಪ್ಪಲೆ ಜಫ್ತಿ ಮಾಡಲಾಯಿತು.

ಡಿಸೆಂಬರ್ 13ರಂದು ರಾಮಕೃಷ್ಣ ನಾರಾಯಣ ಭಟ್ಟರಿಗೆ 3 ತಿಂಗಳು ಕಠಿಣಶಿಕ್ಷೆ, 35 ರೂ. ದಂಡ, ಅದನ್ನು ನೀಡದಿದ್ದಲ್ಲಿ ಒಂದು ತಿಂಗಳು ಶಿಕ್ಷೆ ವಿಧಿಸಲಾಯಿತು. ದಂಡದ ಹಣ ತುಂಬದಿದ್ದಕ್ಕಾಗಿ ಅಧಿಕಾರಿಗಳು ಡೊಂಬೆಸರಕ್ಕೆ ದಂಡವಸೂಲಿಗೆ ಗಣಪತಿ ಹವಾಲ್ದಾರನನ್ನು ಕಳಿಸಿದರು. ಭಟ್ಟರ ಹೆಂಡತಿ ಸೊಸೆ ಮಾತ್ರ ಮನೆಯಲ್ಲಿದ್ದರು. ಅವರು ತಮ್ಮ ನೆರವಿಗೆ ಬೊಪ್ಪನಹಳ್ಳಿ ರಾಮಭಟ್ಟರನ್ನು ಕರೆಸಿದರು. ಸೊಸೆಯ ವಶದಲ್ಲಿದ್ದ ನೋಟುಗಳನ್ನು ಕಂಡ ಹವಾಲ್ದಾರರು ಅವರನ್ನು ಅವಾಚ್ಯ ಶಬ್ದಗಳಿಂದ ಬೈದು ಬಲಾತ್ಕಾರದಿಂದ ನೋಟುಗಳನ್ನು ಕಸಿದುಕೊಂಡು ಪಾವತಿ ನೀಡಿದರು. ಈ ತಪಾಸಣೆ ನಡೆಯುತ್ತಿದ್ದಾಗ ಹೊರಗಿನವರು ಬಂದು ಜಮಾಯಿಸುತ್ತಿದ್ದುದನ್ನು ಕಂಡ ಹವಾಲ್ದಾರರು ಒಳಕ್ಕೆ ಬಂದರೆ ಕುತ್ತಿಗೆ ಹಿಡಿದು ಹೊರಗೆ ಹಾಕುವುದಾಗಿ ಗದರಿಸಿದರು.

ಅಂಕೋಲೆಯಲ್ಲಿ ತಾರಾಬೆನ್ ಅವರಿಗೆ 6 ತಿಂಗಳ ಸಶ್ರಮ ಶಿಕ್ಷೆ 100 ರೂ. ಜುಲ್ಮಾನೆ ವಿಧಿಸಲಾಯ್ತು. ದಂಡ ವಸೂಲಿಗಾಗಿ ಅವರ ತಂದೆ ನಾನಾಬಾಯ್ ಎಂಬುವರ ಕೆಲವು ಕುರ್ಚಿಗಳನ್ನು ಒಂದು ಸೈಕಲ್ 3 ರಾಟೆಗಳು ಮೇಜುಗಳು ಮಂಚ, ಕನ್ನಡಕ ಇವುಗಳನ್ನು ವಶಪಡಿಸಿಕೊಳ್ಳಲಾಯಿತು.

ಕುಮುಟಾದಲ್ಲಿ 20 ಮಂದಿ ಪೋಲೀಸರು ಕೂಡಿಕೊಂಡು ಸಾಂತೇರಿ ಕಾಮಾಕ್ಷಿ ದೇವಾಲಯದ ಎದುರಿಗೆ ನಿಲ್ಲಿಸಿದ್ದ ಧ್ವಜಸ್ಥಂಭವನ್ನು ಗರಗಸದಿಂದ ಕೊಯ್ದು ನೆಲಕ್ಕೆ ಕೆಡವಿದರು. ಅಕ್ಕಪಕ್ಕದ ಮನೆಗಳಲ್ಲಿ ಮಲಗಿದ್ದವರು ಹೊರಗೆ ಬಂದು ಪ್ರತಿಭಟಿಸಿದಾಗ 72 ಜನರನ್ನು ಖೈದುಮಾಡಿ, ಧ್ವಜಸ್ಥಂಭವನ್ನು ತುಂಡುತುಂಡು ಮಾಡಿ ತಾಲ್ಲೂಕು ಕಛೇರಿಗೆ ಒಯ್ದರು. ಲಂಬಾಪುರದ ದೇವಸ್ಥಾನದ ಅರ್ಚಕ ಶಿವರಾಮಭಟ್ಟ ಕೋಡೀಗದ್ದೆ ಮನೆ ಜಪ್ತಿ ಮಾಡಿ ಅಕ್ಕಿ ಚೀಲ, ಸಣ್ಣ ದೊಡ್ಡ ಹಿತ್ತಾಳೆ, ತಾಮ್ರದ ಪಾತ್ರೆಗಳು 29 ಹಾಗೂ ಅಂಗವಸ್ತ್ರ, ಸೀರೆ ಪಂಚೆ ಸಹ ವಶಪಡಿಸಿಕೊಂಡರು. ಇಟಗಿಯ ಗಣಪತಯ್ಯ ನೆಹರು ಭದ್ರನ್ ಇವರು 18 ರೂ. ಬಾಕಿಗಾಗಿ ಅವರ 3 ಆಕಳು, ಒಂದು ಕರು ಒಂದು ಎಮ್ಮೆ ಒಯ್ದಿದ್ದಾರೆ. ಕರ್ಕಿಸವಲ ಕೇಂದ್ರದ ಶಿಬಳಿತಿಮ್ಮಪ್ಪ ಇವರಲ್ಲಿ ಜಪ್ತಿ ಮಾಡಿ 18 ನಿತ್ಯೋಪಯೋಗಿ ಪಾತ್ರೆಗಳನ್ನು ಕೊಂಡು ಹೋದರು. ಫೋರ್‌ಫೀಟ್ ನೋಟೀಸ್‌ಗೆ ಕೈರಟ್ಟೆ ಹಿಡಿದು ಒತ್ತಾಯದಿಂದ ಸಹಿ ಹಾಕಿಸಿಕೊಂಡರು. ಸಿದ್ದಾಪುರ ತಾಲ್ಲೂಕು ಬಾಳೂರ ಕೇಂದ್ರದಲ್ಲಿ ದಿ.15-8-1932ರಂದು ಪೋಲೀಸರು ದೇವಂಭಟ್ಟರ ಮನೆ, ಲಂಭೋದರಭಟ್ಟರ ಮನೆ, ದೇವಭಟ್ಟರ ಮಗ ನಾರಾಯಣ ಭಟ್ಟರ ಮನೆಗಳನ್ನೂ ಶೋಧಿಸಿ 12 ಮೂಟೆ ಅಕ್ಕಿ ಕೊಂಡೊಯ್ದರು. ಇವರೆಲ್ಲರ ಮನೆಯವರೂ ಉಪವಾಸ ಬೀಳುವಂತಾಯಿತು.

ಸಿದ್ದಾಪುರ ತಾಲ್ಲೂಕು ಕರ್ಕಿಸವಲ ಕೇಂದ್ರದಲ್ಲಿ ದಿ.23-09-1932ರಂದು ಉಪವಾಸ ಹಾಗೂ ಪ್ರಾರ್ಥನಾ ಸಭೆ ದಿನಾಚರಣೆಯನ್ನು ಆಚರಿಸಲಾಯಿತು. 40, 50 ಮಂದಿ ಸ್ತ್ರೀ ಪುರುಷರು ಉಪವಾಸ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು.

ಇಟಗಿಯಲ್ಲಿ 23-09-1932ರಂದು ವಾನರ ಸೇನೆಯಿಂದ ಪ್ರಭಾತಪೇರಿ ನಡೆಯಿತು. ಪ್ರಭಾತ್ ಫೇರಿ ಪಟೇಲರ ಮನೆ ಮುಂದೆ ಬಂದಾಗ ಪೋಲೀಸರು ಹುಡುಗರನ್ನು ಥಳಿಸಿದರು. ಅವರ ಕೈಲಿದ್ದ ಧ್ವಜವನ್ನು ಕಸಿದುಕೊಂಡರು.

ದಿ. 22-09-1932 ರಂದು ಸೊಪ್ಪಿನಕೊಪ್ಪ ಗ್ರಾಮದ ತಿಮ್ಮಬಡಿಯಾ ಅವರ ಹುಲ್ಲುಬನ್ನಿ, ಒಂದು ರೂಪಾಯಿ ಬಾಕಿಗಾಗಿ 4 ಸೇರು ಯಾಲಕ್ಕಿಯನ್ನು ಪಾವತಿಕೊಡದೇ ವಶಪಡಿಸಿಕೊಳ್ಳಲಾಯಿತು.

ದಿ.29-09-1932ರಂದು ಮಧ್ಯಾಹ್ನ 3 ಗಂಟೆ ಹೊತ್ತಿಗೆ ಹೊಸಕೊಪ್ಪಕ್ಕೆ ಪೋಲೀಸರು ಬಂದು ಮುತ್ತಿಗೆ ಹಾಕಿ ಮಲಗಿದ್ದ ಗಣೇಶಭಟ್ಟ ಸುಬ್ಬಾಭಟ್ಟ ಅಡವಿತೋಟ ಅವರ ರಟ್ಟೆ ಹಿಡಿದು ಎಳೆದು ವಶಕ್ಕೆ ಪಡೆದುಕೊಂಡರು. ಅವರ ಜೊತೆಗೆ ಇದ್ದ ಮಂಜುನಾಥ ನಾರ್ಣಪ್ಪ ಹೊಸಕೊಪ್ಪ ಅವರಿಗೆ ಹೊಡೆಯಲು ಆರಂಭಿಸಿದರು. ಬೇರೆ ಬೇರೆ ಮನೆಗಳಿಗೆ ನುಗ್ಗಿ ಕಾಂಗ್ರೆಸ್ ಕಾರ್ಯಕರ್ತರು ಅವಿತುಕೊಂಡಿದ್ದಾರೆಂದು ಹೇಳಿ ಹುಡುಕಲಾರಂಭಿಸಿದರು. ಒಂದು ಮನೆಯಲ್ಲಿ ಗಂಗಮ್ಮ, ಸೀತಮ್ಮ ಮಾತ್ರ ಇದ್ದರು. ಅವರು ಗಂಡಸರ್‍ಯಾರು ಇಲ್ಲ ಒಳಕ್ಕೆ ಬಿಡುವುದಿಲ್ಲ ಎಂದರು. ಅವರನ್ನು ದೂಡಿ ಪಕ್ಕಕ್ಕೆ ಸರಿಸಿ ಪೋಲೀಸರು ಮನೆಯನ್ನು ಶೋಧ ಮಾಡಿದರು.

ದಿ.28-11-32ರಂದು ಭೂಕಂದಾಯ ನೀಡದಿದ್ದಕ್ಕಾಗಿ ಸರ್ಕಾರ ವಶಪಡಿಸಿಕೊಂಡಿದ್ದ ಮನೆಗಳ ಬೀಗ ಮುರಿದು ಸ್ತ್ರೀ ಸತ್ಯಾಗ್ರಹಿಗಳು ತಮ್ಮ ವಶಕ್ಕೆ ತೆಗೆದುಕೊಂಡರು. ಅವರಿಗೆ ಶಿಕ್ಷೆ ವಿಧಿಸಲಾಯಿತು. ತಿಮ್ಮಮ್ಮ ಗಣಪಯ್ಯ ಹೆಗಡೆ ಕೆಳಗಿನ ಮನೆ ಮಹದೇವಿ ನಾರಾಯಣ ಹೆಗ್ಡೆ ಹರಗಿ, ತಿಮ್ಮಮ್ಮ ಸುಬ್ರಾಯ ಹೆಗಡೆ, ಸಾವಿತ್ರಮ್ಮ ವಿನಾಯಕಭಟ್ಟ ದಾಸಹುಡ್ಲು ಯಮುನಾಬಾಯಿ ಗಣಪತಿ ಹೆಗಡೆ ಬಿಜ್ಜಾಳ, ಲಕ್ಷಮ್ಮ ದೇವರಹೆಗಡೆ, ಸರಸ್ವತಿ ಪರಮೇಶ್ವರ ಭಟ್ಟ ಗುಂಡೇಕೊಪ್ಪ ಎಲ್ಲರಿಗೂ ತಲಾ ಒಂದು ವರ್ಷ ಶಿಕ್ಷೆ ವಿಧಿಸಲಾಯಿತು. ದಿ.10-12-1932 ರಂದು ಶೀರಳಗಿ ಕೇಂದ್ರದ ಮುಗದೂರ್ ಮಂಜಮ್ಮನ ತೋಟವನ್ನು ಲಿಲಾವಿನಲ್ಲಿ ಕೊಂಡ ಉಪ್ಪಡ್ಡಿರಾಮಯ್ಯ ಬಂದು ಅಡಿಕೆಗೊನೆ ಕೊಯ್ದ ಮೇಲೆ ಮನೆ ಹತ್ತಿರ ಇದ್ದ ಬಾಳೆಗೊನೆ ಕಡಿಯಲು ಬಂದಾಗ ಮಂಜಮ್ಮ ರಾಮಯ್ಯನನ್ನು ತಡೆದರು. ನಿಮ್ಮನ್ನು ಮನೆಯಿಂದ ಹೊರಗೆ ಹಾಕುತ್ತೇನೆಂದು ರಾಮಯ್ಯ ಆರ್ಭಟಿಸಿದ. ಮಂಜಮ್ಮನ

ಮಗಳು ನೀನು ಏನು ಮಾಡುತ್ತೀಯೋ ಮಾಡು ಎಂದು ಹೇಳಿ ಬಾಳೆಗೊನೆಯನ್ನು ಕೊಚ್ಚಿ ಕೊಚ್ಚಿ ಎಸೆದಳು. ರಾಮಯ್ಯ ಕಾಲು ಕಿತ್ತ. ದಿ.12-12-1932ರಂದು ರಾಮಕೃಷ್ಣ ಸುಬ್ಬಯ್ಯ ಹೆಗ್ಡೆ ಕೆಳಗಿನ ತೊಳಗಿ ಇವರ ಮನೆಗೆ ಅಧಿಕಾರಿಗಳು ಬಂದು ಮುತ್ತಿಗೆ ಹಾಕಿ ಎರಡು ಮಣ ಅಡಿಕೆಗೋಟು, ಮೂರು ಮಣ ಅಡಿಕೆ, 45 ರೂ.ಗಳ ಇತರೆ ಸಾಮಾನುಗಳನ್ನು ಜಪ್ತಿ ಮಾಡಿಕೊಂಡು ಹೋದರು, ರಸೀತಿ ಕೊಟ್ಟಿಲ್ಲ.

ಸುಮಿತ್ರಮ್ಮ ಕೋಂ. ನಾರಾಯಣಪ್ಪ ಇವರ ಮನೆಯಿಂದ 6 ಮಣ ಹಸಿ ಅಡಿಕೆ, 43 ರೂ.ಗಳನ್ನು ಪಂಚನಾಮೆ ಮಾಡದೆ ಕೊಂಡೊಯ್ದಿದ್ದಾರೆ. ಅದೇ ಕಾಲಕ್ಕೆ ರಾಮಕೃಷ್ಣ ಸುಬ್ಬಯ್ಯ ಹೆಗಡೆ ಅವರ ಆಳನ್ನು ಅಡಿಕೆ ತುಂಬಲು ಕರೆದರು. ಅವನು ಬರುವುದಿಲ್ಲ ಎನ್ನಲು, ಅವನಿಗೆ ಮನ ಬಂದಂತೆ ಬೈದು, ಪೋಲೀಸರು ಅವನನ್ನು ಥಳಿಸಿ ಅಡಿಕೆ ತುಂಬಿಕೊಂಡು ಹೋದರು.

ಶೀರಳಗಿ ಕೇಂದ್ರದ ರಾಮಚಂದ್ರ ವೆಂಕಟ್ರರಮಣ ಹೆಗ್ಡೆ ಶೀರಳಿ ಇವರಿಗೆ ದಿ.23-10-32ರಂದು ಚಳುವಳಿಯಲ್ಲಿ ಭಾಗವಹಿಸಿದ್ದಕ್ಕೆ ನೋಟೀಸ್ ಕೊಟ್ಟು ದಿನಕ್ಕೆ ಎರಡು ಸಲ ಪೊಲೀಸ್ ಸ್ಟೇಷನ್‌ಗೆ ಬಂದು ಹೋಗಬೇಕೆಂದು ತಿಳಿಸಲಾಗಿತ್ತು. ಅವರು ಆ ಆಜ್ಞೆಯನ್ನು ಮುರಿದಿದ್ದರಿಂದ ದಿ.13-12-1932ರಂದು ಒಬ್ಬ ಪೋಲೀಸ್ ಹವಾಲ್ದಾರರು ಬಂದು ಮನೆಗೆ ಮುತ್ತಿಗೆ ಹಾಕಿದನು. ಬಾಯಿಗೆ ಬಂದಂತೆ ಬಯ್ದು ಬಡಿಗೆಯಿಂದ ಹೊಡೆಯಲು ಮುಂದಾದನು. ಆಗ ಅವನ ಪತ್ನಿ ನನ್ನನ್ನು ಅವರೆದುರಿಗೆ ಕೊಂದುಬಿಡಿ ಎಂದು ಕನಲಿದರು. ರಾಮಚಂದ್ರ ಹೆಗಡೆಯವರನ್ನು ಬಂಧಿಸಿ ಕರೆದುಕೊಂಡು ಹೋದರು. ಅವರಿಗೆ 6 ತಿಂಗಳು ಕಠಿಣ ಸಜೆ ವಿಧಿಸಲಾಯಿತು.

ದಿ.8-12-1932ರಂದು ಕುಳೇಬೀಡು ಕೇಂದ್ರದ ಮುಂಡಿಗೆ ತಗ್ಗಿನಲ್ಲಿ ಪೋಲೀಸರು ಬಂದು ಗಿಡ್ಡಾಕನ್ನಾ, ಗಣಪಾಬೀರಾ, ತಿಮ್ಮಪ್ಪಯ್ಯ ಈ ಮೂವರ ಮನೆಯಿಂದ ಪ್ರತಿಯೊಬ್ಬರಿಂದ ಒಂದು

ಚೀಲ ಭತ್ತ ಜಪ್ತಿ ಮಾಡಿದರು. ಏತಕ್ಕಾಗಿ ಈ ಜಪ್ತಿ ಎಂದು ಅವರು ಕೇಳಿದ್ದಕ್ಕೆ ಗಣೇಶ ಗಣಪತಯ್ಯ ಹೆಗಡೆ ಬೆಳ್ಳಿ ಮಕ್ಕಿ ಇವರ ಫ್ಲೋರ್‌ಫೀಟ್ ಆದ ಜಮೀನಿನ ಬೆಳೆ ನೀವು ಕುಯ್ದಿದ್ದೀರಿ. ಆದ್ದರಿಂದ ಜಪ್ತಿ ಮಾಡಿದ್ದೇನೆ ಎಂದರು.

ದಿ.8–12–1932ರಂದು ತಾರೇಸರದ ಕೇಂದ್ರದ ಹೀರೇಕಾಯ್ ಗಂಗಪ್ಪನ ಮನೆಗೆ ಗೋಳಕ್ಕಿ ಪಟೇಲರ ಜೊತೆಗೂಡಿ ತಾರೇಸರದ ಆಲೆ ನಾರ್ಣಪ್ಪ ಅವರನ್ನು ಕರೆದುಕೊಂಡು ಬಂದು ಪೋಲೀಸರು ಬಾಗಿಲು ಒಡೆದು ಒಳಹೊಕ್ಕು ತಪಾಸಣೆ ಮಾಡಿಕೊಂಡು ಹೋದರು. ದಿ.8–12–1932ರ ದಿನ ತೀರ್ವೆ ಕೊಡದ ನಿಮಿತ್ತ ಹರಾಜಿಗೆ ಇಟ್ಟಿದ್ದ ರಾಮಯ್ಯಭಟ್ಟಯ್ಯ ಅವರ ಗದ್ದೆಯನ್ನು ಸೊಟಗೈಪಟೇಲನ ತಂದೆ ವೆಂಕಪ್ಪ ಹರಾಜಿನಲ್ಲಿ ಕೊಂಡಿದ್ದ. 12ನೇ ತಾರೀಖು ಭತ್ತವನ್ನೂ ಕೊಯ್ದಿದ್ದರು. 35 ಚೀಲ ಕೊಯ್ಲು ಆಯಿತು. ತಾರೇಸರ ಕೇಂದ್ರದ ಮಹಾಬಲಯ್ಯ ದೇವಪ್ಪ ಬೋಳಸುತ್ತ ಅವರ ಜಮೀನನ್ನು ತೀರ್ವೆ ಕೊಡದ ನಿಮಿತ್ತ ಹರಾಜಿಗೆ ಇಟ್ಟಿದ್ದರು. ಅದನ್ನು ಯಾರೂ ಕೊಳ್ಳಲಿಲ್ಲ. ನಾರ್ಣಪ್ಪ ಅಣ್ಣಯ್ಯ ಅವರ ಜಮೀನನ್ನು ಸೊಸೈಟಿಯವರು ಕೊಂಡಿದ್ದಾರೆ.

ಕೃಷ್ಣಪ್ಪ ತಿಮ್ಮಯ್ಯ ಇವರ ಜಮೀನನ್ನು ಸರ್ಕಾರ ವಶಪಡಿಸಿಕೊಂಡಿತ್ತು. ಹರಾಜಿನಲ್ಲಿ ಯಾರೂ ಕೂಗಲಿಲ್ಲ. ಹಾಗಾಗಿ ಸರ್ಕಾರದವರೇ ಅಡಿಕೆಯನ್ನು ಕೊಯ್ದುಕೊಂಡು ಹೋಗಿ ಹೊಸತೋಟದ ಪಟೇಲನಿಗೆ ಅದನ್ನು ಮಾರಾಟ ಮಾಡಿದರು.

ವೆಂಕಪ್ಪ ರಾಮಯ್ಯ ಕಣಸಲ ಕೋಣೆ ಸುಮಾರು 1200 ರೂ. ತೀರ್ವೆಕೊಡತಕ್ಕವರಾಗಿದ್ದು 173 ರೂ. ಬಾಕಿ ಉಳಿಸಿಕೊಂಡಿದ್ದರು. ದಿ.27–10–1932ರಂದು ಅವರನ್ನು ಖೈದು ಮಾಡಿದರು. ಶೀಗೇಹಳ್ಳಿ ವೆಂಕಟಪ್ಪ ಗೌಡರು ಜಾಮೀನು ನೀಡಿದ ಮೇಲೆ ಬಿಡುಗಡೆ ಮಾಡಲಾಯಿತು. ಮತ್ತೆ ದಿ.15–12–1932ರಂದು ಅವರನ್ನು ಬಂಧಿಸಿ, ದಿ.18–12–1932ರಂದು ವಿಚಾರಣೆ ನಡೆಸಿ ಅವರಿಗೆ

3 ತಿಂಗಳು ಸಜಾ 50 ರೂ. ದಂಡ ವಿಧಿಸಲಾಯಿತು. ಹೇರೂರು ಕೇಂದ್ರದ ಕಿಬ್ಬಳ್ಳಿ ಗ್ರಾಮದ ಕೊಡಗಿನ ಮನೆ ವೆಂಕಟ್ರಾಮಯ್ಯ ಎಂಬುವರು ಕಳೆದ ವರ್ಷದ ತೀರ್ವೆಕೊಡದ್ದರಿಂದ ಅವರ ಜಮೀನನ್ನು ವಶಪಡಿಸಿಕೊಂಡು, ಲಿಲಾವಾಗದೇ ಇದ್ದಿದ್ದರಿಂದ ಪಡದಲ್ಲಿಟ್ಟಿದ್ದರು. ಬೆಳೆಯನ್ನು ಕೊಯ್ಯಿಸಿ ಬೀರೂರಿಗೆ ತಂದರು. ಅಡಿಕೆ ಬೆಳೆ ಕೊಯ್ಯುವುದರ ಜೊತೆ ಮೆಣಸು, ಯಾಲಕ್ಕಿ ಬೆಳೆಗಳನ್ನು ನಾಶಮಾಡಿದ್ದಾರೆ. ವೆಂಕಟರಾಮಯ್ಯ ಕಣಗಲಕೋಟೆ ಇವರಿಗೆ ದಂಡ ಕೊಡದ ಕಾರಣ 3 ತಿಂಗಳು ಶಿಕ್ಷೆ 50 ರೂ. ದಂಡ ವಿಧಿಸಿದರು.

ಸಿದ್ದಾಪುರ ತಾಲ್ಲೂಕು ಕಲ್ಲಗದ್ದೆಯಲ್ಲಿ ಪರಮೇಶ್ವರ ನಾರಾಯಣಭಟ್ಟ ಕಲ್ಲಗದ್ದೆ ಇವರು ಸತ್ಯಾಗ್ರಹಿಯ ಮಾಲುಕೊಂಡಿದ್ದರಿಂದ ಅವರ ಮನೆ ಮುಂದೆ ಸತ್ಯಾಗ್ರಹ ನಡೆಯಿತು. ಇಡ್ಕಲ್‌ಗದ್ದೆ ವೆಂಕಮ್ಮ, ರಾಮಕೃಷ್ಣಹೆಗಡೆ, ಖಿರಾರೇಣುಕಮ್ಮ, ರಾಮಕೃಷ್ಣ ಹೆಗಡೆ ಹೊಂಡಸಗಿ ಈ ನಾಲ್ವರು ಉಪವಾಸ ವ್ರತ ಕೈಗೊಂಡರು. ಇವರ ಜೊತೆಗೆ 14 ವರ್ಷದ ಗಣಪತಿ ನರಸಿಂಹಭಟ್ಟ ಯಲುಗಾರ ಇದ್ದ ಸುದ್ದಿ ತರಲಿಕ್ಕೆಂದು ಹೋದ ರಾಮಕೃಷ್ಣ ರಾಮಭಟ್ಟ ಕರ್ಜಗಿ ಅವರನ್ನು ಪರಮೇಶ್ವರಭಟ್ಟರೂ ಶ್ಯಾನುಭೋಗರೂ ಹಿಡಿದು ಕೂಡಿಸಿಕೊಂಡರು. ಈ ನಾಲ್ವರನ್ನು ದಸ್ತಗಿರಿಮಾಡಿ ಅರ್ಥದಾರಿ ಕರೆತರುವಷ್ಟರಲ್ಲಿ ಶಿವರಾಮವಿಠ್ಠಪ್ಪ ಇಡ್ಕಲ್‌ಗದ್ದೆ, ಗಣಪತಿ ಮಂಜಪ್ಪ ಹೆಗಡೆ ಕವಲಕಟ್ಟು ಈ ಇಬ್ಬರು ಬಂದರು. ಇವರನ್ನೂ ಬಂಧಿಸಿ ಸಿದ್ದಾಪುರ ಮಾಮಲೇದಾರರ ಕಛೇರಿಗೆ ಒಯ್ದರು. ಇವರಿಗೆ ತಲಾ 6 ತಿಂಗಳ ಸಜೆ ವಿಧಿಸಲ್ಪಟ್ಟಿತು. ದಿ.5-11-1932ರಂದು ಕುಳೇಬೀಡ ಕೇಂದ್ರದ ಕೊಳಗದ್ದೆಗೆ ಜಪ್ತೀ ಅಧಿಕಾರಿಗಳು ಬಂದು 15$^1/_2$ ಮಣ ಒಣಗಿದ ಅಡಿಕೆ, 4 ಮಣ ಹಸೀ ಅಡಕೆ ತೆಗೆದುಕೊಂಡು ಹೋದರು. ಪಾವ್ತಿ ಕೊಡಲಿಲ್ಲ.

ಮಾವಿನಗುಂಡಿಯ ರಸ್ತೆ ಕಾರ್ಕೂನನು ಹರಾಜಿನಲ್ಲಿ ಕೊಂಡ ದನವನ್ನು ಹಿಂದಿರುಗಿಸುವಂತೆ ಸತ್ಯಾಗ್ರಹ ನಡೆಯಿತು. ಆತ ಆಕಳನ್ನು

ಬಿಟ್ಟುಕೊಟ್ಟ. ದಿ.6-11-1932ರಂದು ಪೋಲೀಸರು ಬಂದು ಕೃಷ್ಣಭಟ್ಟ ಮಹಾಬಲಭಟ್ಟ ಕುಳೀಬೀಡ್ ಇವರಲ್ಲಿದ್ದ ಸದರಿ ದನವನ್ನು ಹೊಡೆದುಕೊಂಡುಹೋದರು. ಕುಳೇಬೀಡು ಗ್ರಾಮದ ಗಣೇಶರಾಮಭಟ್ಟ ಕುಳೇಬೀಡ್ ಇವರಿಗೆ ತೀರ್ವೆ ಕೊಡದ್ದರಿಂದ ದಿ.12-12-32ರಂದು ಅವರ ಜಮೀನನ್ನು ಹರಾಜು ಮಾಡುವುದಾಗಿ ನೋಟೀಸ್ ನೀಡಲಾಗಿತ್ತು. ಹಾಗೆಯೇ ಕುಳೇಬೀಡ್ ಕೇಂದ್ರದ ಕೊಡಸೆಯಲ್ಲಿರುವ ಹೂವಿನ ಮನೆ ಗಂಗಮ್ಮ ಇವರ ಆಸ್ತಿಯನ್ನು ಹರಾಜಿಗೆ ಇಟ್ಟರು. ಕುಳಿಬೀಡು ಕೇಂದ್ರದ ಗಣೇಶ ಗಣಪಯ್ಯ ಹೆಗಡೆ ಬೆಳ್ಳಿಮಕ್ಕಿ ಇವರು ತೀರ್ವೆ ಕೊಡದ್ದರಿಂದ ಅವರ ಜಮೀನನ್ನು ಸರ್ಕಾರ ವಶಪಡಿಸಿಕೊಂಡಿತು. ಮಾವಿನ ಗುಂಡಿ ಹವಾಲ್ದಾರರು. ದಿ.9-12-1932ರಂದು ಅಡಿಕೆ ಕೊಯ್ಯಲು ಯಾರೂ ಮುಂದೆ ಬರಲಿಲ್ಲವಾಗಿ ಸಂಜೆಗೆ ಹೊರಟುಹೋದರು.

ದಿ.1-11-1932ರಂದು ಕಾಸಳ್ಳಿ ಹಾಲಪ್ಪ ಮಾಸ್ತರ ಬೆಳೆ ಹಾಳು ಮಾಡಲು ಬಂದಿರುವರೆಂದು 11 ಮಂದಿಯನ್ನು ದಸ್ತಗಿರಿ ಮಾಡಲಾಯಿತು. ಗಣೇಶ್‌ರಾವ್ ಎಂಬುವವರನ್ನು ಬಂದೂಕಿನಿಂದ ಬಡಿದರು. ರಾಮಕೃಷ್ಣ ಬೆಳ್ಳೆಣ್ಣೆ ಎಂಬುವರನ್ನು ಬಾಯಿಕಟ್ಟಿ ಹೊಡೆದರು. ಶಂಕರಭಟ್ಟ ಕೆಳದಿ ಅವರಿಗೆ ಮೈಮುರಿಯುವಂತೆ ಬಡಿದರು. ಮಹಾಬಲೇಶ್ವರಪ್ಪ ಶಿವಪ್ಪ ಕಲ್ಲರಮನೆ ಇವರಿಗೂ ಹೊಡೆತ ಬಿತ್ತು. ಕಣಶಾ ತಿಮ್ಮ ಎಂಬುವವನಿಗೆ ನೀನು ಟಪಾಲು ತರುತ್ತೀ, ನಿನ್ನ ಕೊಂದುಬಿಡುತ್ತೇವೆ ಎಂದು ಹೇಳಿ ಹೊಡೆದರು. ಅವರನ್ನೆಲ್ಲ ಸಿದ್ದಾಪುರಕ್ಕೆ ಕೊಂಡೊಯ್ಯುವಾಗ ಇಬ್ಬಿಬ್ಬರ ಹಿಂಗೈ ಕಟ್ಟಿ ಒಯ್ದರು. ಇವರಿಗೆಲ್ಲ ತಲಾ 6 ತಿಂಗಳ ಶಿಕ್ಷೆ ಆಯಿತು.

ದಿ.21-12-32ರಂದು ಅಧಿಕಾರಿಗಳು ಬಾಳೇಸರದ ದೇವರು ಗಣಪಯ್ಯ ಹೆಗಡೆ ಶಮೆಮನೆ ಇವರ ತೋಟದೊಳಗಿನ ಅಡಿಕೆ ಗೊನೆ ಕೊಯ್ಸಿಸಿ ಹೆರೂರಿಗೆ ಒಯ್ದರು. ನಂತರ ಸದ್ರಿ ದೇವರ ಹೆಗ್ಡೇರಲ್ಲಿ ಜಪ್ತಿ ಮಾಡಿ 3 ಕಬ್ಬಿಣದ ಹಾರೆಗೋಲು, 3 ಗುದ್ಲಿ, 3 ಕೊಡ್ಲಿ, 3

ಹಾಸಿಗೆ ಪಿಂಡಿ, 2 ಮಣ ಅಡಿಕೆ, 4 ಮೆಣ್‌ಗತ್ತಿ ಮುಂತಾದುವನ್ನು ಹೇರೂರಿಗೆ ಒಯ್ದರು.

ಹಳೇಬೀಡು ಕೇಂದ್ರದ ಗಣೇಶರಾಮಭಟ್ಟ ತೀರ್ವೆ ಕೊಡದ್ದರಿಂದ 104 ರೂ ಬಾಕಿಗಾಗಿ ಅವರ ತೋಟ ಹರಾಜು ಮಾಡುವ ನೋಟೀಸ್ ಹೊರಡಿಸಲಾಯಿತು. ಅದೇ ಗ್ರಾಮದ ರಾಮಯ್ಯ ಗಣಪಯ್ಯ ಹೆಗಡೆ ಅವರ ತೋರ್ವೆಗ್ರಾಮದ ಗದ್ದೆಯೊಳಗಿನ ಬೆಳೆಯನ್ನೂ ಕುಯ್ಯಲಾಯಿತು.

ದಿ.13-12-1932ರಂದು ಮುಂಡ್ಲೆತಗ್ಗು ಎಂಬಲ್ಲಿಗೆ ಪೋಲೀಸರು ಬಂದು ಗಿಡ್ಡಾಕನ್ನಾ ಮನೆಯಲ್ಲಿದ್ದ ಆರು ಖಂಡುಗ ಭತ್ತ ಜಪ್ತಿಮಾಡಿ ಗಿಡ್ಡಾಕನ್ಯಾ, ಗಣಪಾಬೀರ, ತಿಮ್ಮತಿಮ್ಮಾ ಇವರನ್ನೆಲ್ಲ ಖೈದುಮಾಡಿ ಸಿದ್ದಾಪುರಕ್ಕೆ ಒಯ್ದರು.

ದಿ.13-12-1932ರಂದು ಅಧಿಕಾರಿಗಳು ಕುಳೇಬೀಡ್ ಕೇಂದ್ರದ ರಾಮಯ್ಯಗಣಪಯ್ಯ ಹೆಗಡೆ ತೋರ್ಮೆ ಅವರ ಮನೆಗೆ ಗಂಡಸರ್‍ಯಾರೂ ಇಲ್ಲದ ವೇಳೆಯಲ್ಲಿ ಹೋಗಿ ಮನೆ ಜಪ್ತಿಮಾಡಿ ಒಂದು ಡಬ್ಬಿ ಬೆಟ್ಟೆ, (ಕಿಮ್ಮತ್ತು 3 ರೂ.) ಪಂಚನಾಮೆ ಮಾಡದೆ ಒಯ್ದಿದ್ದಾರೆ. ತಾರೇಸರಕೇಂದ್ರದ ಸುಬ್ರಾಯ್‌ಭಟ್ ತಟ್ಟಿ ಕೈ ಮನೆಗೆ ಹತ್ತು ಜನ ಬಂದು ದಿ.17-12-1932ರಂದು ಜಪ್ತಿ ಮಾಡಿ 77 ರೂ. ಗಳ ಪಾತ್ರೆ, ಅಡಿಕೆ ವಗೈರೆ ಕೊಂಡು ಹೋಗಿದ್ದಾರೆ.

1932ರ ನವೆಂಬರ್ ತಿಂಗಳಲ್ಲಿ ಸಿದ್ದಾಪುರ ತಾಲ್ಲೂಕಿನಲ್ಲಿ ಖೈದಾದವರ ವಿವರ ಹೀಗಿದೆ.

| | | |
|---|---|---|
| ಖೈದಾದವರ ಸಂಖ್ಯೆ 90 | ಗಂಡಸರು 64 | ಹೆಂಗಸರು 26 |
| ಶಿಕ್ಷೆಯಾದವರ ಸಂಖ್ಯೆ 66 | ಗಂಡಸರು 44 | ಹೆಂಗಸರು 32 |
| ಹೊಡೆತ ತಿಂದವರು 20 | ಗಂಡಸರು 18 | ಹೆಂಗಸರು 02 |

ಕೆಳಗಿನ ಮನೆಯಲ್ಲಿ ಸರ್ಕಾರದ ಮಾಲು ಒಯ್ಯಲು ಅಡ್ಡಿ ಮಾಡಿದ್ದಕ್ಕಾಗಿ 6 ತಿಂಗಳು ಶಿಕ್ಷೆಗೆ ಗುರಿಯಾದ ಗಣೇಶ ಸುಬ್ಬಯ್ಯ ಸಂಗೋಳಿಮನೆ ಅವರು ಸೆರೆಮನೆಯಲ್ಲಿ ಅನ್ಯರು ಮಾಡಿದ ಅಡುಗೆಯನ್ನು ಊಟಮಾಡುವುದಿಲ್ಲವೆಂದು ಉಪವಾಸ ಮಾಡಿದರು. ಏಳು ದಿನಗಳ ಮೇಲೆ ಅವರಿಗೆ ತಾವೇ ತಮ್ಮ ಅಡುಗೆ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಯಿತು.

ದಿ.11-10-1931ರಂದು ನಾನು ಉತ್ತರ ಕನ್ನಡ ಜಿಲ್ಲೆಯ ಸಿರ್ಸಿ ಮತ್ತು ಸಿದ್ದಾಪುರ ತಾಲ್ಲೂಕುಗಳಲ್ಲಿ 30 ಮೈಲಿ ಸುತ್ತಿದೆ. ಹಳ್ಳಿಗಳೆಲ್ಲ ಖಾಲಿ ಖಾಲಿ. ದನಗಳು ಸಿಕ್ಕಲ್ಲಿ ಮೇಯುತ್ತಿದ್ದವು. ಸರ್ವಸ್ವವನ್ನೂ ಬಿಟ್ಟು ಈ ಜನ ಸೆರೆಮನೆ ಸೇರಿದರು. ಎಂದು ಕ್ರಾನಿಕಲ್ ಪತ್ರಿಕೆಯ ಪ್ರತಿನಿಧಿ ವರದಿ ಮಾಡಿದರು.

ರೈತರು ಎಲ್ಲ ಊರಲ್ಲೂ ಮಾಡಿಕೊಂಡಿದ್ದ ನಿಯಮ ಹೀಗಿತ್ತು : ಜಪ್ತಿಗೆ ಅಧಿಕಾರಿಗಳು ಬಂದರೆ ಜಾಗಟೆ ಬಾರಿಸಿ ಸೂಚನೆ ಕೊಡಬೇಕು. ಜಪ್ತಿ ಮಾಡುವುದು ಕಾಯ್ದೆಗೆ ವಿರೋಧ ಆದರೂ ಜಪ್ತಿ ಮಾಡುವರಾದರೆ ಪಂಚರು ಸಿಗದಂತೆ ನೋಡಿಕೊಳ್ಳಬೇಕು. ಆಹಾರಧಾನ್ಯ ಪಾತ್ರೆ, ಪದಾರ್ಥ ಕೊಂಡು ಹೋದರೂ ಯಾರೂ ಹರಾಜಿನಲ್ಲಿ ಕೂಗಬಾರದು. ಎಷ್ಟು ಕಷ್ಟ ಬಂದರೂ ಪ್ರತಿಜ್ಞೆ ಭಂಗಮಾಡಬಾರದು. ಯಾರೂ ಹುಲ್ಲು ಬನ್ನಿಕರ, ಭೂಕಂದಾಯ ಕೊಡಬೇಡಿ.

-(ಆಧಾರ: ಅಂದಿನ ಕರಪತ್ರಗಳು)

# ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕರ್ನಾಟಕದ ಮಹಿಳೆಯರ ಪಾತ್ರ

ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕದ ಪಾತ್ರ ಅಮೋಘವಾದದ್ದು. ಮಹಿಳೆಯರ ಪಾತ್ರ ಕೂಡ ಅಷ್ಟೇ ಗಮನಾರ್ಹವಾದದ್ದು.

ಮೈಸೂರು ಕಾಂಗ್ರೆಸ್ ಸ್ಥಾಪನೆಯಾದದ್ದು 1938ರಲ್ಲಿ. ಶಿವಪುರದಲ್ಲಿ, ಅದಕ್ಕೆಷ್ಟೋ ಮೊದಲು 1857ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕೂ ಮೊದಲು ಕಿತ್ತೂರು ರಾಣಿ ಚೆನ್ನಮ್ಮ, ಬಿದನೂರಿನ ರಾಣಿ ಅಬ್ಬಕ್ಕ ಇಂಗ್ಲಿಷರ ವಿರುದ್ಧ ಸಂಗ್ರಾಮ ನಡೆಸಿದ್ದರು.

1932ರಲ್ಲಿ ಅಂಕೋಲೆಯಲ್ಲಿ ಉಪ್ಪಿನ ಸತ್ಯಾಗ್ರಹ ಅಖಂಡವಾಗಿ 45 ದಿನ ನಡೆದ ಮೇಲೆ ಕ್ರಮೇಣ ಅದನ್ನು ಬಂದುಮಾಡಿ ಅಸಹಕಾರ ಚಳವಳಿಯನ್ನು ಕೈಗೆತ್ತಿಕೊಳ್ಳಲಾಯಿತು. ಇದರ ಅಂಗವಾಗಿ ಅರಣ್ಯ ಸತ್ಯಾಗ್ರಹ, ಕರನಿರಾಕರಣ ಚಳವಳಿ, ಹೆಂಡದಂಗಡಿಗಳ ಪಿಕೆಟಿಂಗ್ ಮುಂತಾದ ಕಾರ್ಯಕ್ರಮಗಳನ್ನು ಒಳಗೊಂಡ ಆಂದೋಲನವನ್ನು ಮುಂದುವರೆಸಲು 1930ನೇ ಮೇ 17ನೇ ತಾರೀಖು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿ ತೀರ್ಮಾನ ಕೈಗೊಂಡಿತು.

ಸರ್ದಾರ್ ಕೆ.ಎ. ವೆಂಕಟರಾಮಯ್ಯನವರನ್ನು ಈ ಎಲ್ಲ ಸತ್ಯಾಗ್ರಹಗಳ ಮೇಲ್ವಿಚಾರಕರನ್ನಾಗಿ ನೇಮಿಸಲಾಯಿತು.

ಕೆ.ಎ. ವೆಂಕಟರಾಮಯ್ಯ ಅವರು ಪತ್ನಿ ಗೌರಮ್ಮನವರೊಡನೆ ಸಿರ್ಸಿಗೆ ಬಂದು ಕಾರ್ಯಕ್ರಮ ಯೋಜನೆ ತಯಾರಿಸಲು ಸನ್ನದ್ಧರಾದರು. ಈ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳಲು ಮೈಸೂರಿನ ಎಂ.ಎನ್. ಜೋಯಿಸ್ ಮತ್ತು ಅವರ ಪತ್ನಿ ಸುಬ್ಬಮ್ಮ, ಚೆಂಗಲಾರಾಧ್ಯ ದಂಪತಿಗಳು ಬಂದಿಳಿದರು.

ಕಂದಾಯ ಕೊಡಲು ನಿರಾಕರಿಸಿದ ರೈತರ ಮನೆಗಳಿಗೆ ಅಧಿಕಾರಿಗಳು ನುಗ್ಗಿ ಪಾತ್ರೆ ಪದಾರ್ಥಗಳನ್ನೂ, ಎಮ್ಮೆ ಹಸುಗಳನ್ನೂ ಜಫ್ತುಮಾಡಿ ಹರಾಜು ಮಾಡಲು ಆರಂಭಿಸಿದರು. ಗ್ರಾಮಗಳ ಜನರಲ್ಲಿ ಒಗ್ಗಟ್ಟಾಗಿ ಯಾರೂ ಲಿಲಾವುಗಳಲ್ಲಿ ಭಾಗವಹಿಸುತ್ತಿರಲಿಲ್ಲ. ಹಾಗೂ ಯಾರಾದರೂ ಲಿಲಾವಿನಲ್ಲಿ ಭಾಗವಹಿಸಿ ಎಮ್ಮೆ, ಹಸುಗಳನ್ನು ಕೊಂಡರೆ ಹೆಣ್ಣುಮಕ್ಕಳು ಉಪವಾಸ ಸತ್ಯಾಗ್ರಹ ನಡೆಸುತ್ತಿದ್ದರು. ಈ ಮಹಿಳಾ ಸತ್ಯಾಗ್ರಹಿಗಳ ಮೇಲೆ ಹೆಂಡವನ್ನು ಸುರಿಯಲಾಗುತ್ತಿತ್ತು. ಕುಡುಕರನ್ನು ಬಿಟ್ಟು ದಾಂಧಲೆ ಮಾಡಿಸಲಾಗುತ್ತಿತ್ತು. ಕುಡುಕರು ಸತ್ಯಾಗ್ರಹಿಗಳನ್ನು ವಾಚಾಮಗೋಚರವಾಗಿ ಬಯ್ಯುತ್ತಿದ್ದರು. ಅದಾವುದಕ್ಕೂ ಈ ಧೀರಮಹಿಳೆಯರು ಜಗ್ಗುತ್ತಿರಲಿಲ್ಲ. ಶೀಲಭಂಗವಾಗುವ ಸಂದರ್ಭ ಒದಗಿದರೆ ಪ್ರತೀಕಾರಕ್ಕೂ, ಪ್ರಾಣಾರ್ಪಣೆಗೂ ಈ ಸ್ತ್ರೀಸತ್ಯಾಗ್ರಹಿಗಳು ತಯಾರಿದ್ದರು. ಸ್ವತ್ತುಗಳನ್ನು ಹರಾಜಿನಲ್ಲಿ ಕೊಂಡವರು ತಾವು ಕೊಂಡ ಜಾನುವಾರುಗಳನ್ನೂ ಪಾತ್ರೆ ಪದಾರ್ಥಗಳನ್ನೂ ಹಿಂದಿರುಗಿಸುವವರೆಗೂ ಅವರುಗಳ ಮನೆ ಮುಂದೆ ಈ ನಿರಶನ ಸತ್ಯಾಗ್ರಹ ಮುಂದುವರೆಯುತ್ತಿತ್ತು.

ಈ ಹೆಣ್ಣುಮಕ್ಕಳು ಪಟ್ಟಪಾಡು, ಎದುರಿಸಿದ ಸವಾಲುಗಳು ಕಣ್ಣಲ್ಲಿ ನೀರು ಮಿಡಿಸುವಂಥವು. ಗೌರಮ್ಮ, ಕಲ್ಹಾಳದ ಕಾವೇರಮ್ಮ ಗೋದಾವರಿ ಬಾಯ್, ಎರಡು ದಿನದ ಮಗುವಿನ ತಾಯಿ ಸೀತಾಬಾಯ್ ಮಡಗಾಂವಕರ್, ಸಿರ್ಸಿಯ ಸೀತಾಬಾಯ್, ಹಣಬೆಬೈಲು ದುಗ್ಗಮ್ಮ, ಮುಗುದೂರ್ ಸುಬ್ಬಮ್ಮ, ಕನ್ನಳ್ಳಿ ಸೀತಾಬಾಯ್, ಶೀರಳಗಿ ಗಂಗಾಬಾಯ್, ಪಾರ್ವತಿಬಾಯ್, ಇಡಕಲಗದ್ದೆ ತಿಮ್ಮಮ್ಮ, ಗುಂಜಗೋಡ್ ಮಹದೇವಮ್ಮ (ಮಹದೇವಿ ತಾಯಿ), ಹರಿಗೆ ಸರಸ್ವತಮ್ಮ, ಸುಬ್ಬಮ್ಮಾ ಜೋಯಿಸ್ ಮುಂತಾದ ಮಹಿಳಾ ಸತ್ಯಾಗ್ರಹಿಗಳ ಅಗ್ನಿಪರೀಕ್ಷೆಯೇ ಈ ಹೋರಾಟದಲ್ಲಿ ನಡೆದುಹೋಯಿತು.

ಉಮಾಬಾಯಿ ಕುಂದಾಪುರ, ಕೃಷ್ಣಬಾಯಿ ಪಣಜೀಕರ್, 1932ರ ಉಪ್ಪಿನ ಸತ್ಯಾಗ್ರಹಕ್ಕೆ ಬೆಂಬಲಕೋರಿ ಧಾರವಾಡ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರಯಾತ್ರೆ ಕೈಗೊಂಡರು. ಅವರು ಮಾಡಿದ ಉಗ್ರ ಭಾಷಣಗಳಿಗಾಗಿ ಅವರನ್ನು ಬಂಧಿಸಿ ಯರವಾಡಾ ಸೆರೆಮನೆಗೆ ದೂಡಲಾಯಿತು. ಆರು ತಿಂಗಳ ಸಶ್ರಮ ಶಿಕ್ಷೆ, 300 ರೂ. ದಂಡ ವಿಧಿಸಲಾಯಿತು. ಮರಾಠಿ, ಕನ್ನಡಗಳಲ್ಲಿ ಅಸ್ಖಲಿತವಾಗಿ ಮಾತನಾಡುತ್ತಿದ್ದ ಕೃಷ್ಣಾಬಾಯಿ ರತ್ನಗಿರಿಗೆ ಹೋಗಿ ಮರಾಠಿಯಲ್ಲಿ ಭಾಷಣ ಮಾಡಿದ್ದಕ್ಕೆ 1942ರಲ್ಲಿ ಒಂದು ವರ್ಷಕಾಲ ಸ್ಥಾನಬದ್ಧತೆಯಲ್ಲಿರಬೇಕಾಯಿತು.

ಸರ್ದಾರ್ ವೀರನಗೌಡರ ಪತ್ನಿ ನಾಗಮ್ಮ 1942ರ ಚಳವಳಿಯಲ್ಲಿ ಅವರ ಮಗಳು ಲೀಲಾವತಿ ಮಾಗಡಿಯವರೊಡನೆ ಬಂಧಿತರಾದರು. ಅದೇ ಕಾಲಕ್ಕೆ ನಾಗಮ್ಮನವರ ಪತಿ ಸರ್ದಾರ್ ವೀರನಗೌಡ ಪಾಟೀಲರೂ, ಅವರ ಅಳಿಯ ವಿ.ಟಿ. ಮಾಗಡಿಯವರೂ ಸೆರೆಮನೆಯಲ್ಲಿದ್ದರು.

ಸರ್ಕಾರದ ವಿರುದ್ಧ ಘೋಷಣೆಗಳನ್ನು ಕೂಗುತ್ತಾ ಮೆರವಣಿಗೆಯಲ್ಲಿ ಹೊರಟ ಗಂಗೂ ಬೆಳವಡಿ, ಲೀಲಾ ಚಟ್ನೀಸ್, ಇಂದಿರಾ ಬೆಳವಡಿ ಇವರನ್ನು ಪೋಲೀಸರು ಬಂಧಿಸಿದರು. 1942ರ ಚಳುವಳಿಯ ಪ್ರಾರಂಭದಲ್ಲಿ ಕುಮಾರಿ ವಿಮಲಾ ಗುಳವಾಡಿ, ಹೇಮಾ ಶಿರೋಳಿಕರ್ ಇವರು ಧಾರವಾಡ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ ಹೊಕ್ಕು ರಾಷ್ಟ್ರಧ್ವಜವನ್ನು ನ್ಯಾಯಾಧೀಶರ ಮೇಜಿನ ಮೇಲಿಟ್ಟು ಕರಪತ್ರ ಹಂಚಿದರು. ಇದಕ್ಕಾಗಿ ಅವರಿಗೆ ತಲಾ 3 ತಿಂಗಳ ಶಿಕ್ಷೆ ಆಯಿತು.

1930ರ ಉಪ್ಪಿನ ಸತ್ಯಾಗ್ರಹ ನಡೆದ ಸಂದರ್ಭದಲ್ಲಿ ಬಸವ್ವ ಎಂಬ ಸಾಮಾನ್ಯ ಹೆಂಗಸು ಉಪ್ಪಿನಪೊಟ್ಟಣಗಳನ್ನು ಗದಗದಲ್ಲಿ ಬಹಿರಂಗವಾಗಿ ಹರಾಜು ಮಾಡಿದಳು. ಆಕೆಯನ್ನೂ ಮತ್ತು ಉಪ್ಪಿನ ಪೊಟ್ಟಣಗಳನ್ನು ಕೊಂಡವರನ್ನೂ ಪೋಲೀಸರು ಬಂಧಿಸಿದರು. ರಟ್ಟೆ

ಹಿಡಿದು ಎಳೆಯಲು ಯತ್ನಿಸಿದ ಪೋಲೀಸನಿಗೆ ಆಕೆ ಛೀಮಾರಿ ಹಾಕಿದಳು. ಬಸಮ್ಮನನ್ನು ಬಂಧಿಸಿ ಕರೆದುಕೊಂಡು ಹೋಗುತ್ತಿದ್ದಾಗ ಒಬ್ಬ ಲಿಂಗಾಯತ ಸಾಹುಕಾರರು ಬಸಮ್ಮನಿಗೆ ಬಹಿಷ್ಕಾರ ಹಾಕುವುದಾಗಿ ಘೋಷಿಸಿದರು. ಆಗ ಈ ಬಡಹೆಂಗಸು ಕನಲಿ ಹೇಳಿದಳು:

'ಸಾವಕಾರ, ನಾನು ಸತ್ತಾಗ ನನ್ನ ಹೆಣ ಹೊರೋಕ್ಕೆ ನೀನು ಬರಬೇಡ. ನಾಯಿ ನರಿ ತಿಂದ್ಹೋಗ್ಲಿ' ನ್ಯಾಯಾಧೀಶರ ಮುಂದೆ ನಿಲ್ಲಿಸಿದಾಗ 'ಹೆಣ್ಣುಮಗಳು ಅಂತ ಆರು ತಿಂಗಳು ಶಿಕ್ಷೆ ವಿಧಿಸಿದ್ದೇನೆ' ಎಂದು ನ್ಯಾಯಾಧೀಶರು ತಿಳಿಸಿದಾಗ 'ಸಾಹೇಬರ, ನೀವು ಉಪಕಾರ ಮಾಡೋದು ನನಗೆ ಬೇಕಾಗಿಲ್ಲ. ನಿಮ್ಮ ಕಾಯ್ದೆಯಲ್ಲಿ ಏನು ಹೇಳೈಯ್ತೋ ಅಷ್ಟು ಶಿಕ್ಷೆ ನನಗೆ ಕೊಟ್ಟುಬಿಡಿ' ಅಂದಳು.

1942ರ ಚಳವಳಿಯಲ್ಲಿ 200 ವಿದ್ಯಾರ್ಥಿನಿಯರು ಬೆಳಗಾವಿಯಲ್ಲಿ ಬಂಧಿತರಾದರು. ನೂರಕ್ಕೂ ಹೆಚ್ಚು ವಿದ್ಯಾರ್ಥಿನಿಯರು ಮೈಸೂರು ಬೆಂಗಳೂರುಗಳಲ್ಲಿ ಶಿಕ್ಷೆಗೆ ಗುರಿಯಾದರು.

ಮೈಸೂರು ಕಾಂಗ್ರೆಸ್ ಸತ್ಯಾಗ್ರಹ ಹೂಡಿದಾಗ ಭಾಗವಹಿಸಿದ ಪ್ರಮುಖ ಮಹಿಳಾ ಸತ್ಯಾಗ್ರಹಿಗಳೆಂದರೆ ಸುಬ್ಬಮ್ಮ ಜೋಯಿಸ್, ಯಶೋಧರಮ್ಮ, ಬಳ್ಳಾರಿ ಸಿದ್ದಮ್ಮ, ಸುನಂದಮ್ಮ, ಅನ್ನಪೂರ್ಣಮ್ಮ ತಿಮ್ಮಾರೆಡ್ಡಿ, ಕಬ್ಬನ್‌ಪೇಟೆ ಅನ್ನಪೂರ್ಣಮ್ಮ, ಸಾವಿತ್ರಮ್ಮ ರಾಮಶರ್ಮ, ತಾಯಮ್ಮ ವೀರಣ್ಣಗೌಡ, ಎಸ್. ಕುಂತಳಾ, ಎಂ. ಆರ್. ಲಕ್ಷಮ್ಮ, ರತ್ನಮ್ಮ ಮಾಧವರಾವ್, ಲಲಿತಮ್ಮ, ಜಿ. ಆರ್. ಸ್ವಾಮಿ, ನಾಗರತ್ನಮ್ಮ ಹಿರೇಮಠ್ ಮುಂತಾದವರು.

ಬಳ್ಳಾರಿ ಸಿದ್ದಮ್ಮ ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. ಧೈರ್ಯದ ಹೆಂಗಸು. ಒಮ್ಮೆ ಮೈಸೂರು ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಪ್ರಚಾರ ಕಾರ್ಯಕ್ಕೆ ಯಶೋಧರಾ ದಾಸಪ್ಪ ಮತ್ತು ಎಂ. ಎನ್. ಜೋಯಿಸ್ ಜೊತೆಗೂಡಿ ಹೋಗಿ

ಭಾಷಣ ಮಾಡುತ್ತಿದ್ದಾಗ ಆ ಭಾಗದ ಸಾಹುಕಾರರ ಕಡೆಯವರು ಒಂದು ದಪ್ಪ ಕಲ್ಲೂ ತೂರಿದರು. ಆ ಕಲ್ಲು ಬಳ್ಳಾರಿ ಸಿದ್ದಮ್ಮನವರ ಹಣೆಗೆ ಬಡಿಯಿತು. ಧಾರಾಕಾರವಾಗಿ ರಕ್ತ ಸುರಿಯಲಾರಂಭಿಸಿತು. ಸಿದ್ದಮ್ಮ ಅವರು ಭಾಷಣ ನಿಲ್ಲಿಸಲಿಲ್ಲ. 'ಭಾರತಾಂಬೆಯ ಬಿಡುಗಡೆಗೆ ನಾವು ಹೋರಾಡುತ್ತಿದ್ದೇವೆ. ಈ ಹೋರಾಟದಲ್ಲಿ ನಮ್ಮ ಪ್ರಾಣವೇ ಹೋದರೂ ನಾವು ಹಿಮ್ಮೆಟ್ಟುವುದಿಲ್ಲ. ದೇಶದ ಬಿಡುಗಡೆಗಾಗಿ ನನ್ನ ರಕ್ತ ಚೆಲ್ಲಲೂ ಸಿದ್ಧ' ಎಂದು ಗುಡುಗಿದರು. ಯಶೋಧರಮ್ಮ ಅವರು ತಾವು ಉಟ್ಟಿದ್ದ ಹೊಸ ರೇಷ್ಮೆಸೀರೆಯ ಸೆರಗನ್ನೇ ಹರಿದು ಬಳ್ಳಾರಿ ಸಿದ್ದಮ್ಮನವರ ಹಣೆಗೆ ಬ್ಯಾಂಡೇಜ್ ಕಟ್ಟಲು ಹೋದಾಗ ಬಳ್ಳಾರಿ ಸಿದ್ದಮ್ಮ ಕಟ್ಟುವುದು ಬೇಡ ಎಂದರು.

ಶಿವಪುರದ ಸಮಾವೇಶದ ಸಂದರ್ಭದಲ್ಲಿ ರಾಷ್ಟ್ರಧ್ವಜವನ್ನು ಹಾರಿಸಬಾರದೆಂದು ನಿಷೇಧಾಜ್ಞೆ ಜಾರಿಗೊಳಿಸಲಾಯಿತು. ಈ ಆಜ್ಞೆ ಮುರಿಯುವುದೇ ಬೇಡವೇ ಎಂದು ನಾಯಕರು ಚರ್ಚೆ ಮಾಡುತ್ತಿದ್ದಾಗ, ಯಶೋಧರಮ್ಮ ಅವರು, 'ನೀವು ಗಂಡಸರು ಈ ಆಜ್ಞೆಯನ್ನು ಮುರಿದು ಬಾವುಟ ಹಾರಿಸಲು ಮುಂದಾಗದೆ ಹೋದರೆ, ನಾನೇ ಬಾವುಟ ಹಾರಿಸುತ್ತೇನೆ' ಎಂದು ಘೋಷಿಸಿದರು. ಇದರ ಪರಿಣಾಮವಾಗಿ ಪ್ರತಿಬಂಧಕಾಜ್ಞೆ ಮುರಿಯುವ ತೀರ್ಮಾನವನ್ನು ಕೈಗೊಂಡದ್ದಲ್ಲದೆ ಮೈಸೂರು ಕಾಂಗ್ರೆಸ್ಸಿನ ಪ್ರಥಮ ಅಧ್ಯಕ್ಷರಾದ ಟಿ. ಸಿದ್ಧಲಿಂಗಯ್ಯನವರೇ ಧ್ವಜವನ್ನು ಹಾರಿಸುವುದೆಂಬ ತೀರ್ಮಾನವನ್ನೂ ಕೈಗೊಳ್ಳಲಾಯಿತು.

ಮೈಸೂರಿನಲ್ಲಿ ಸುಬ್ಬರಾಯನಕೆರೆ ಮೈದಾನದಲ್ಲಿ ರಾಷ್ಟ್ರಧ್ವಜ ಹಾರಿಸಬಾರದೆಂಬ ಕಾನೂನು ಬಹುಕಾಲ ಜಾರಿಯಲ್ಲಿತ್ತು. ಪ್ರತಿತಿಂಗಳೂ ಒಬ್ಬರು ಬಾವುಟ ಹಾರಿಸಿ ಸೆರೆಮನೆ ಸೇರುತ್ತಿದ್ದರು. ಈ ಸಾರಿ ಆ ಹೊಣೆಗಾರಿಕೆ ಸುಬ್ಬಮ್ಮ ಜೋಯಿಸ್ ಅವರ ಮೇಲೆ ಬಿತ್ತು. ಸುಬ್ಬಮ್ಮ ತಮ್ಮ ಅತ್ತೆಯವರನ್ನು ಕರೆದುಕೊಂಡು ಕಂಕುಳಲ್ಲಿ ಮಗುವನ್ನೆತ್ತಿಕೊಂಡು ಪ್ರತಿಬಂಧಕಾಜ್ಞೆ ಮುರಿಯಲು ಸುಬ್ಬರಾಯನ

ಕೆರೆ ಮೈದಾನಕ್ಕೆ ಬಂದರು. ಆ ವೇಳೆಗಾಗಲೇ ಎಂ. ಎನ್. ಜೋಯಿಸರು ಇದೇ ಕಾರಣಕ್ಕಾಗಿ ಸೆರೆಮನೆ ಸೇರಿದ್ದರು. ಸುಬ್ಬಮ್ಮ ಅವರು ಕಂಕುಳಲ್ಲಿದ್ದ ಮಗುವನ್ನು ಅತ್ತೆಯವರ ಕೈಗಿತ್ತು, ಧ್ವಜಾರೋಹಣ ಮಾಡಿದರು. ಪೋಲೀಸರು ಸುಬ್ಬಮ್ಮನವರನ್ನು ದಸ್ತಗಿರಿ ಮಾಡಲು ಮುಂದೆ ಬಂದರು. ಸುಬ್ಬಮ್ಮ ಅತ್ತೆಗೆ ನಮಸ್ಕಾರ ಮಾಡಿ ಮಗುವನ್ನು ಅವರಿಂದ ಪಡೆದು ತನ್ನ ತೋಳಿಗೇರಿಸಿಕೊಂಡು ಪೋಲೀಸ್ ಠಾಣೆಗೆ ನಡೆದೇ ಬಿಟ್ಟರು. ಸುಬ್ಬಮ್ಮನವರಿಗೆ ಆರು ತಿಂಗಳ ಸೆರೆಮನೆಯ ಶಿಕ್ಷೆ ವಿಧಿಸಲಾಯಿತು.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಮಂಗಳೂರಿನ ಕಮಲಾದೇವಿ ಚಟ್ಟೋಪಾಧ್ಯಾಯ ಅವರನ್ನು ನೆನೆಯದೇ ಇದ್ದರೆ ತಪ್ಪಾದೀತು. ಈಕೆ ವಿದೇಶಗಳಲ್ಲಿ ವ್ಯಾಸಂಗ ಮಾಡಿದ ವಿದ್ಯಾವಂತ ಮಹಿಳೆ, ಕಾಂಗ್ರೆಸ್ಸಿನ ಪ್ರಚಾರ ಕಾರ್ಯದಲ್ಲಿ ಇವರದು ಮಹತ್ವದ ಪಾತ್ರ, ಅವರೆಷ್ಟು ಸಾರಿ ಪ್ರತಿಬಂಧಕಾಜ್ಞೆಗಳನ್ನು ಮುರಿದು ಸೆರೆಮನೆ ಸೇರಿದರೋ ಲೆಕ್ಕವಿಲ್ಲ. ಸೋಷಲಿಸ್ಟ್ ಸಿದ್ಧಾಂತಕ್ಕೆ ಒಲಿದಿದ್ದ ಕಮಲಾ ದೇವಿಯವರದು ಬಹು ದೊಡ್ಡ ವ್ಯಕ್ತಿತ್ವ. ಸಭ್ಯತೆಗೆ ಸರಳತೆಗೆ ಮತ್ತೊಂದು ಹೆಸರು ಕಮಲಾದೇವಿ.

ಹೀಗೆ ಕರ್ನಾಟಕದ ವೀರಮಣಿಯರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯ ಪಾತ್ರವಹಿಸಿ ರಾಷ್ಟ್ರಕ್ಕೆ ಅಮೋಘ ಸೇವೆ ಸಲ್ಲಿಸಿದ್ದಾರೆ.

# ಲೇಖಕರ ಪರಿಚಯ



## ಡಾ. ಎಚ್.ಎಸ್. ದೊರೆಸ್ವಾಮಿ

ದೊರೆಸ್ವಾಮಿ ಅವರು ಏಪ್ರಿಲ್ 10, 1918ರಲ್ಲಿ ಹಾರೋಹಳ್ಳಿ ಯಲ್ಲಿ ಜನಿಸಿದವರಾಗಿದ್ದಾರೆ. ಮಹಾತ್ಮ ಗಾಂಧಿ ಅವರ "ಮೈ ಅರ್ಲಿ ಲೈಫ್" ಕೃತಿಯಿಂದ ಪ್ರೇರಿತರಾಗಿ ಭಾರತದ ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಅವರ ಪ್ರೌಢ ಶಿಕ್ಷಣದ ಸಮಯದಲ್ಲಿ, ಬೆಂಗಳೂರಿನಲ್ಲಿ ಸ್ವಾತಂತ್ರ್ಯ ಜಾಗೃತಿ ಕಾರ್ಯಕ್ರಮವೊಂದರಲ್ಲಿ ಭಾಗವಹಿಸಿದ್ದ ಎಲ್ಲ ನಾಯಕರ ಜೊತೆ ಇವರನ್ನೂ ಬಂಧಿಸಲಾಯಿತು. ಆನಂತರ ವಿದ್ಯಾರ್ಥಿಗಳನ್ನು ಸಂಘಟಿಸಿ ಅನೇಕ ಹೋರಾಟಗಳನ್ನು ನಡೆಸಿದರು. ಇದರಿಂದಾಗಿ ಬೆಂಗಳೂರಿಗೆ ಆಗಮಿಸುತ್ತಿದ್ದ ಅನೇಕ ನಾಯಕರುಗಳ ಒಡನಾಟ ಹೆಚ್ಚಾಯಿತು. ಇವರು ಬಿ.ಎಸ್.ಸಿ ಪದವಿ ಪೂರ್ಣಗೊಳಿಸಿ, ಉಪನ್ಯಾಸಕರಾಗಿ ವೃತ್ತಿಯನ್ನು ಆರಂಭಿಸಿದರು. ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ವಿದ್ಯಾರ್ಥಿಗಳೊಂದಿಗೆ ಪಾಲ್ಗೊಂಡರು. ಅವರ ಸಹೋದರ ಹೆಚ್. ಎಸ್. ಸೀತಾರಾಮ್, ಸರ್ದಾರ್ ವೆಂಕಟರಾಮಯ್ಯ ಮತ್ತು ಎ.ಜಿ. ರಾಮಚಂದ್ರರಾವ್ ಬ್ರಿಟೀಷರ ವಿರುದ್ಧ ಪ್ರತಿಭಟನೆಯನ್ನು ಆಯೋಜಿಸಿದರು. ಎಚ್.ಎಸ್. ಸೀತಾರಾಂ ನಂತರ ಬೆಂಗಳೂರಿನ ಮೇಯರ್ ಆಗಿಯೂ ಸೇವೆ ಸಲ್ಲಿಸಿದ್ದರು. ಸರ್ಕಾರಿ ದಾಖಲೆಗಳನ್ನು ಹಾನಿ ಮಾಡಲು ಬಳಸಲು ಟೈಮ್ ಬಾಂಬ್‌ನ್ನು ತಯಾರಿಸಿದ ಆರೋಪದಲ್ಲಿ ಹೆಚ್.ಎಸ್.ಡಿ. ಅವರು 14 ತಿಂಗಳ ಕಾಲ ಸೆರೆವಾಸ ಅನುಭವಿಸಬೇಕಾಯಿತು. ಅನಂತರ ಗಾಂಧಿ ಅವರ ತತ್ವ ಸಿದ್ಧಾಂತಗಳಿಂದ ಪ್ರೇರಿತರಾಗಿ ಅಹಿಂಸೆ ಮತ್ತು ಸತ್ಯಾಗ್ರಹದ ಆದರ್ಶಗಳನ್ನು ಅನುಸರಿಸಲು ನಿರ್ಧರಿಸಿದರು. ಇವರು ಸಾಹಿತ್ಯ ಮಂದಿರವೆಂಬ ಪುಸ್ತಕ ಮಳಿಗೆ ಮತ್ತು ಪ್ರಕಾಶನ ಡಿಪೋವನ್ನು ಸ್ಥಾಪಿಸಿದರು. ಅಲ್ಲಿ ಆರ್.ಕೆ. ನಾರಾಯಣ್ ಮತ್ತು ಕೆ.ಎಸ್. ನರಸಿಂಹಸ್ವಾಮಿ ಇನ್ನೂ ಮುಂತಾದವರು ಇವರ ಆತ್ಮೀಯ ಬಳಗದಲ್ಲಿದ್ದರು.

ಪತ್ರಕರ್ತರಾಗಿ ಹೆಚ್.ಎಸ್.ಡಿ. : "ಪೌರವಾಣಿ" ಪತ್ರಿಕಾ ಸಂಪಾದಕತ್ವವನ್ನು 1947ರ ಜನವರಿಯಲ್ಲಿ ಹಿಂದಿನ ಸಂಪಾದಕರಾಗಿದ್ದ ಭದ್ರಣ್ಣ ಅವರಿಂದ ಪಡೆದ ನಂತರ, ಮೈಸೂರಿನಲ್ಲಿದ್ದ ಸಾಹಿತ್ಯ ಮಂದಿರ ಪ್ರಕಾಶನ ಮತ್ತು ಪುಸ್ತಕ ಮಳಿಗೆಯನ್ನು ಖಾಲಿ ಮಾಡಿ ಬೆಂಗಳೂರಿಗೆ ಬಂದು ನೆಲಸಿದರು. ಈ ಪತ್ರಿಕೆಯಲ್ಲಿ 'ಮೈಸೂರು ಚಲೋ' ಕುರಿತಾಗಿ ತಿ.ತಾ. ಶರ್ಮ ಅವರ ಲೇಖನಗಳನ್ನು ಪ್ರಕಟಿಸಿದ್ದಕ್ಕಾಗಿ ಅಂದಿನ ಆರ್ಕಾಟರ ಸರ್ಕಾರ, ಪೌರವಾಣಿ ಪತ್ರಿಕೆ ಕಚೇರಿಗೆ 1947ರ ಆಗಸ್ಟ್ 30ರಂದು ಬೀಗ ಮುದ್ರೆ ಹಾಕಿತ್ತು. ಅದಾಗ್ಯೂ, ದೊರೆಸ್ವಾಮಿ ಅವರು ಮದ್ರಾಸ್ ಪ್ರಾಂತ್ಯಕ್ಕೆ ಸೇರಿದ್ದ ಹಿಂದೂಪುರಕ್ಕೆ ಉಟ್ಟಬಟ್ಟೆಯಲ್ಲಿ ಹೊರಟು ಕೇವಲ 8 ದಿನದೊಳಗೆ 1947ರ ಸೆಪ್ಟಂಬರ್ 7 ರಂದು ಪೌರವಾಣಿ ಪತ್ರಿಕೆ ಪ್ರಕಟಿಸಿದರು. ಮತ್ತು ಅಂದಿನ ಸ್ವಾತಂತ್ರ್ಯ ಚಳುವಳಿಗಾರರು, ಬೆಂಗಳೂರಿನಲ್ಲಿ ತಂದು ವಿತರಣೆ ಮಾಡುತ್ತಿದ್ದರು. ಆದರೆ ಆಗಿನ ಸರ್ಕಾರ ಆ ಪತ್ರಿಕೆ, ಮೈಸೂರು ಸಂಸ್ಥಾನಕ್ಕೆ ಬರಬಾರದೆಂದು ಆದೇಶ ಹೊರಡಿಸಿತ್ತು. ಛಲ ಬಿಡದೆ, ಅದೇ ಪತ್ರಿಕೆಯನ್ನು 'ಪೌರವೀರ' ಎಂಬ ನಾಮಾಂಕಿತದಿಂದ ಪ್ರಕಟಿಸಲಾಯಿತು. ಭಾರತ ಸ್ವಾತಂತ್ರ್ಯದ ನಂತರ ಬೆಂಗಳೂರಿಗೆ ಬಂದು, ಎಲ್ಲಿಂದಲೇ ಪತ್ರಿಕೆ ಹೊರತಂದರು. ಸ್ವಾತಂತ್ರ್ಯಾ ನಂತರ 1953ರಲ್ಲಿ ಪತ್ರಕರ್ತರ ಸಂಘದ ಅಧ್ಯಕ್ಷತೆ, ಪತ್ರಕರ್ತರ ಸಹಕಾರ ಸಂಘದ ಸ್ಥಾಪನೆಯಾಯಿತು.

ಏಕೀಕರಣ ಚಳವಳಿಯಲ್ಲಿ ಬಳ್ಳಾರಿ ಸಿದ್ದಮ್ಮ, ಬಿ.ಎನ್. ಬೋರೇಗೌಡ, ನರಸಿಂಹಯ್ಯನವರೊಡಗೂಡಿ, ಮೈಸೂರು ಸಂಸ್ಥಾನದಲ್ಲಿ ಪ್ರವಾಸ ಮಾಡಿ, ಜನ ಜಾಗೃತಿಗೊಳಿಸಿದ್ದರು. ನಂತರ ಏಕೀಕರಣವನ್ನು ಒತ್ತಾಯಿಸಲು, ದೆಹಲಿಗೆ ತೆರಳುವ ನಿಯೋಗದೊಂದಿಗೆ ತೆರಳಿ, ರಾಷ್ಟ್ರಪತಿ ಬಾಬು ರಾಜೇಂದ್ರ ಪ್ರಸಾದ್ ಅವರು ಪ್ರಧಾನಿ ನೆಹರು, ವಲ್ಲಭಬಾಯ್ ಪಟೇಲ್ ಅವರನ್ನು ಭೇಟಿ ಮಾಡಿ, ನಿವೇದನೆ ಸಲ್ಲಿಸಿದರು. ಅಲ್ಲಿಂದ ಸಂದೇಶ ತಂದು, "ಮಹಾರಾಜರಿಗೆ ಸಿಂಹಾಸ ತೆರವು ಮಾಡಬೇಕೆಂಬ" ನಿವೇದನೆಯನ್ನು ಪತ್ರಿಕೆಗಳ ಮೂಲಕ ಪ್ರಕಟಿಸಿದರು. ಅರಸೀಕೆರೆಯಲ್ಲಿ ಬಳ್ಳಾರಿ ಸಿದ್ದಮ್ಮ ಅವರ ಅಧ್ಯಕ್ಷತೆಯಲ್ಲಿ ಸರ್ವಪಕ್ಷಗಳ ಸಮ್ಮೇಳನ ಫಜಲ್ ಆಲಿ ಆಯೋಗದ ಮುಂದೆ ಪ್ರಸ್ತಾವನೆ ಮಂಡನೆ, **'Welcome Bellary'** ಸ್ಮರಣ ಸಂಚಿಕೆ ಪ್ರಕಟಣೆ ಮಾಡಿದ್ದರು.

ವಿವಾಹ : ಶ್ರೀಮತಿ ಲಲಿತಮ್ಮ ಅವರನ್ನು 1950ರಲ್ಲಿ ವಾಸವಿ ಧರ್ಮಶಾಲೆಯಲ್ಲಿ ವಿವಾಹವಾದರು. ಇವರಿಗೆ ಒಬ್ಬಳು ಹೆಣ್ಣು ಮಗಳು ಮತ್ತು ಒಬ್ಬ ಮಗನಿದ್ದಾನೆ.

ಸಂಸ್ಥೆಯ ಸಂಚಾಲಕ : ರಾಷ್ಟ್ರ ಮಟ್ಟದ ಭಾರತ ಸೇವಕ ಸಮಾಜದ ಮೈಸೂರು ಪ್ರಾಂತ್ಯದ ಸಂಚಾಲಕರಾಗಿ ದೊರೆಸ್ವಾಮಿ ಅವರು ಕಾರ್ಯ ನಿರ್ವಹಿಸಿದರು. ದಾಸರ ಕಾಲೋನಿ, ವಾಲ್ಮೀಕಿನಗರ, ಸುಧಾರಣೆ ಚರ್ಮೋದ್ಯೋಗ ಸಹಕಾರ ಸಂಘ ಸ್ಥಾಪನೆ. ಭಾರತ ಸಾಧು ಸಮಾಜ ಆರಂಭ, ಶಾಲಾ ಶಿಕ್ಷಕರಿಗೆ ತರಬೇತಿ, ನರ್ಸರಿ ಸ್ಕೂಲ್ ಟೀಚರ್ ಅಸೋಸಿಯೇಷನ್ ಮತ್ತು Nursery Teachers Training College ಸ್ಥಾಪನೆ ಮಾಡಿದ್ದರು. ಅಂದಿನ ಕೆಂಗಲ್ ಹನುಮಂತಯ್ಯ ಸರ್ಕಾರದಿಂದ ಬಂದ ವಿಧಾನ ಪರಿಷತ್ ಸದಸ್ಯತ್ವದ ಪ್ರಸ್ತಾವನೆ ತಿರಸ್ಕಾರ, ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗಿ, 14 ತಿಂಗಳ ಸೆರೆಮನೆ ವಾಸ. ಕರ್ನಾಟಕ ಸರ್ವೋದಯ ಮಂಡಳಿಯಲ್ಲಿ ಭಾಗಿ ಭೂದಾನ ಚಳುವಳಿಯಲ್ಲಿ ಭಾಗಿ, ಹನುವಂತನಗರ ಸಹಕಾರ ಬ್ಯಾಂಕ್ ಸ್ಥಾಪನೆ, ಭಾರತಮಾತಾ ವಿದ್ಯಾಮಂದಿರ ಸ್ಥಾಪನೆ, ಮೈಸೂರು ವಿ.ವಿ.ಯ ಸೆನೆಟ್ ಸದಸ್ಯ, ಬೆಳ್ಳೂರಿನಲ್ಲಿ ಕೋಮು ಸೌಹಾರ್ದತೆಗೆ ಶ್ರಮಿಸಿದ್ದು, ತುರ್ತು ಪರಿಸ್ಥಿತಿಯಲ್ಲಿ ಪ್ರಧಾನಿ ಇಂದಿರಾ ಗಾಂಧಿ ಅವರಿಗೆ ಪತ್ರ, ಜನಜಾಗೃತಿ ಮೂಡಿಸಲು ಕರ್ನಾಟಕದಾದ್ಯಂತ ಪ್ರವಾಸ, ಬಂಧನ, ನಾಲ್ಕು ತಿಂಗಳ ಸೆರೆಮನೆ ವಾಸ, ಕೈಗಾ ಅಣುಶಕ್ತಿ ಸ್ಥಾವರ ಸ್ಥಾಪನೆ ವಿರುದ್ಧ ಹೋರಾಟ–ಪಾದಯಾತ್ರೆ, ಗೋಹತ್ಯಾ ನಿಷೇಧ ಚಳುವಳಿಯಲ್ಲಿ, ಹರಿಹರ ಪಾಲಿಫೈಬರ್ಸ್ ವಿರುದ್ಧ ಹೋರಾಟ– ರೈತ ಚಳುವಳಿಯಲ್ಲಿ ರೈತ ನಾಯಕರೊಂದಿಗೆ ರಾಜ್ಯದಾದ್ಯಂತ ಜಾಗೃತಿ ಪ್ರವಾಸ, ಅಧ್ಯಯನ ಶಿಬಿರದಲ್ಲಿ ಭಾಗಿ, ನೈಸ್ ಕಂಪನಿಯ ಭೂ ಕಬಳಿಕೆ ವಿರುದ್ಧ ಹೋರಾಟ, ಮಂಡೂರು ಕಸ ಸಂಗ್ರಹಗಾರ ಜನಾರೋಗ್ಯ ನೈರ್ಮಲ್ಯಕ್ಕಾಗಿ ಚಳವಳಿ, ಎ.ಟಿ. ರಾಮಸ್ವಾಮಿ ಅವರೊಂದಿಗೆ ಭೂಕಬಳಿಕೆ ವಿರುದ್ಧ 2014ರಲ್ಲಿ ಆಂದೋಲನ, ಕಾವೇರಿ ನದಿ ನೀರು ಹಂಚಿಕೆ. ನ್ಯಾಯಯುತ ಹಂಚಿಕೆ ಸಂಧಾನದ ಮಾರ್ಗ ಸೂಚನೆ, ನಕ್ಸಲರ ಬಿಡುಗಡೆಯ ಮಾನವೀಯ ಹೋರಾಟ, ಭೂಮಿ ಮತ್ತು ವಸತಿ ಹಕ್ಕು ವಂಚಿತರ ಪರವಾಗಿ ಆಂದೋಲನದಲ್ಲಿ ಇಂದಿಗೂ ತೊಡಗಿಕೊಂಡಿರುವ ದಿವ್ಯ ಚೇತನ, ಡಾ. ಹೆಚ್.ಎಸ್. ದೊರೆಸ್ವಾಮಿ ಅವರಾಗಿದ್ದಾರೆ.

## ಗಾಂಧೀಜಿ ಅವರ ಜೀವನ ಘಟನಾವಳಿಗಳು

| | |
|---|---|
| ಪೋರಬಂದರದಲ್ಲಿ ಜನನ | 2.10.1869 |
| ಕಸ್ತೂರ್‌ಬಾರೊಂದಿಗೆ ವಿವಾಹ | 1883 |
| ಮೆಟ್ರಿಕ್ಯುಲೇಶನ್ ಉತ್ತೀರ್ಣರಾದದ್ದು | 1887 |
| ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಪ್ರಯಾಣ | 1888 |
| ಬ್ಯಾರಿಸ್ಟರರಾಗಿ ದಾಖಲಾತಿ | 1891 |
| ಮರಳಿ ಭಾರತಕ್ಕೆ ಬೊಂಬಾಯಿ, | |
| ರಾಜ್‌ಕೋಟೆಯಲ್ಲಿ ವಕೀಲಿ ವೃತ್ತಿ | 1891 |
| ದಕ್ಷಿಣ ಆಫ್ರಿಕಾಕ್ಕೆ ಹಡಗಿನಲ್ಲಿ ಪ್ರಯಾಣ | 1893 |
| ಬೋಯರ್ ಯುದ್ಧ ಮತ್ತು ಜೂಲು ದಂಗೆಯಲ್ಲಿ | |
| ಇಂಡಿಯನ್ ಅಂಬುಲೆನ್ಸ್ ಕೋರ್ ನೇತೃತ್ವ | 1899 |
| ಭಾರತಕ್ಕೆ ವಾಪಸ್ಸು | 1901 |
| ಭಾರತದಲ್ಲಿ ವ್ಯಾಪಕವಾದ ಪ್ರವಾಸ, ಕಲ್ಕತ್ತದಲ್ಲಿ | |
| ಭಾರತ ರಾಷ್ಟ್ರೀಯ ಕಾಂಗ್ರೆಸ್ ಸಭೆಯಲ್ಲಿ | |
| ಪಾಲ್ಗೊಂಡಿದ್ದು, ಬೊಂಬಾಯಿಲ್ಲಿ | |
| ಲಾಯರ್ ಆಫೀಸ್ ಪ್ರಾರಂಭ | 1901 |
| ಭಾರತೀಯರ ಕೋರಿಕೆಯಂತೆ | |
| ದಕ್ಷಿಣ ಆಫ್ರಿಕಾಕ್ಕೆ ಪ್ರಯಾಣ | 1902 |
| ಟ್ರಾನ್ಸ್‌ವಾಲ್ ಬ್ರಿಟಿಷ್ | |
| ಇಂಡಿಯಾ ಅಸೋಸಿಯೇಷನ್ | 1903 |
| ಇಂಡಿಯನ್ ಒಪಿನಿಯನ್ ಪತ್ರಿಕೆಯ ಪ್ರಾರಂಭ | 1904 |
| ಫೀನಿಕ್ಸ್ ಆಶ್ರಮ ಸ್ಥಾಪನೆ | 1904 |
| ಸೆಪ್ಟಂಬರ್ ವೀರಾಗಾಂನಲ್ಲಿ ಸಮುದ್ರ | |
| ಪ್ರಯಾಣಿಕರ ಶೋಷಣೆಯ ವಿರುದ್ಧ | |

| | |
|---|---|
| ಸತ್ಯಾಗ್ರಹ ಮಾಡುವ ಬೆದರಿಕೆ | 1905 |
| ಟ್ರಾನ್ಸ್‌ವಾಲ್‌ನ ಭಾರತೀಯ ವಲಸೆಗಾರರ ಮೇಲೆ ಪ್ರಯೋಗಿಸಲಾಗುವ "ಏಸಿಯಾಟಿಕ್ ಆರ್ಡಿನೆನ್ಸ್ ವಿರುದ್ಧ ಚಳುವಳಿ | 1906 |
| ಬ್ರಹ್ಮಚರ್ಯ ವ್ರತ ಸ್ವೀಕಾರ | 1906 |
| ಇಂಗ್ಲೆಂಡಿಗೆ ಪ್ರಯಾಣ | 1906 |
| ಜೂನ್, ಸತ್ಯಾಗ್ರಹ ಏಷಿಯನ್ನರ ಬಲತ್ಕಾರದ ನೋಂದಾವಣೆ (ಕರಾಳ ಕಾನೂನು) ವಿರುದ್ಧ ಸತ್ಯಾಗ್ರಹ | 1907 |
| ಸತ್ಯಾಗ್ರಹ ನಡೆಸಿದ್ದಕ್ಕೆ ದಕ್ಷಿಣ ಆಫ್ರಿಕಾದ ಜೋಹಾನ್ಸ್‌ಬರ್ಗ್‌ನಲ್ಲಿ ಪ್ರಥಮ ಜೈಲುವಾಸ | 1908 |
| ಇಂಗ್ಲೆಂಡಿಗೆ ಪ್ರಯಾಣ, ಭಾರತೀಯ ವಲಸೆಗಾರರ ಪರವಾದಗಳು, ಸ್ತ್ರೀ ಸ್ವಾತಂತ್ರ್ಯ ಹೋರಾಟ ಪರಿಶೀಲನೆ | 1909 |
| ಮೇ ಜೋಹಾನ್ಸ್‌ಬರ್ಗ್‌ನಲ್ಲಿ ಟಾಲ್‌ಸ್ಟಾಯ್ ಫಾರ್ಮ್ ಸ್ಥಾಪನೆ | 1910 |
| ದಕ್ಷಿಣ ಆಫ್ರಿಕಾದಲ್ಲಿ ಚಾರಿತ್ರಿಕ ಸತ್ಯಾಗ್ರಹ ಆರಂಭ | 1913 |
| ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಆಗಮನ | 1914 |
| ಮೇ ಅಹಮದಾಬಾದ್ ಬಳಿ ಸತ್ಯಾಗ್ರಹ ಆಶ್ರಮ ಸ್ಥಾಪನೆ | 1915 |
| ಸಬರಮತಿ ಆಶ್ರಮ ಸ್ಥಾಪನೆ | 1917 |
| ಫೆಬ್ರವರಿ ಅಹಮದಾಬಾದ್ ಮಿಲ್ ಕೂಲಿಗಾರರ ಪರ ಹೋರಾಟ, ಮೂರು ದಿನ ಉಪವಾಸ ಸತ್ಯಾಗ್ರಹ, ಭರತದಲ್ಲಿ ಇದೇ ಮೊದಲ ಉಪವಾಸ | |
| ಖೇಡಾದಲ್ಲಿ ಕರನಿರಾಕರಣೆ ಚಳುವಳಿ | 1918 |
| ಜಲಿಯನ್ ವಾಲಾಬಾಗ್ ಹತ್ಯಾಕಾಂಡ | |

| | |
|---|---|
| ವಿರೋಧಿಸಿ ಏಪ್ರಿಲ್ 13-14ರಂದು ಉಪವಾಸ | 1919 |
| ಯಂಗ್ ಇಂಡಿಯಾ ಮತ್ತು<br>ನವಜೀವನ ಪತ್ರಿಕೆಗಳ ಆರಂಭ | 1919 |
| ಅಸಹಕಾರ ಚಳುವಳಿ, ಖಿಲಾಫತ್ ಚಳುವಳಿ<br>ಅಖಿಲ ಭಾರತ ಹೋಂರೂಲ್ ಲೀಗ್ ಅಧ್ಯಕ್ಷತೆ | 1920 |
| ಖಾದಿಯ ಪಂಚೆ ಉಡುವ ನಿರ್ಧಾರ ಮತ್ತು<br>ಖಾದಿ ಪ್ರಚಾರ ಆರಂಭ | 1921 |
| ಚೌರಿಚೌರಾ ಹತ್ಯಾಕಾಂಡ, ಅಸಹಕಾರ ಸತ್ಯಾಗ್ರಹ<br>ನಿಲುಗಡೆ, ಬಾರ್ದೋಲಿಯಲ್ಲಿ ಐದು ದಿನದ<br>ಉಪವಾಸ, ಯಂಗ್ ಇಂಡಿಯಾ<br>ಲೇಖನಗಳಿಗಾಗಿ ರಾಜದ್ರೋಹದ ಆಪಾದನೆ<br>ಮೇಲೆ ದಸ್ತಗಿರಿ ಭಾರತದಲ್ಲಿ ಪ್ರಥಮ ಜೈಲುವಾಸ | 1922 |
| ಫೆಬ್ರವರಿ ಯರವಾಡಾ ಜೈಲಿನಿಂದ ಬಿಡುಗಡೆ | 1924 |
| ಹಿಂದೂ ಮುಸ್ಲಿಂ ಏಕತೆಗಾಗಿ 21 ದಿನ ಉಪವಾಸ | 1924 |
| ಬೆಳಗಾವಿ ಕಾಂಗ್ರೆಸ್ ಅಧಿವೇಶನ | 1924 |
| ಚರಖಾ ಸಂಘದ ಸ್ಥಾಪನೆ | 1925 |
| ಬಾರ್ದೋಲಿ ಸತ್ಯಾಗ್ರಹ ಅನ್ಯಾಯದ ತೆರಿಗೆ ವಿರುದ್ಧ | 1928 |
| ಮೂರನೇ ಅಖಿಲ ಭಾರತ ಸತ್ಯಾಗ್ರಹ<br>ಜನವರಿ 26 ರಾಷ್ಟ್ರದಿನವೆಂದು ಸೂಚನೆ<br>ಉಪ್ಪಿನ ಸತ್ಯಾಗ್ರಹ ಮತ್ತು ದಂಡೀಯಾತ್ರೆ | 1930 |
| ಯೂರೋಪು ಸಂದರ್ಶನ ಮತ್ತು<br>ದುಂಡು ಮೇಜಿನ ಪರಿಷತ್ತು ವಿಫಲ | 1931 |
| ಹರಿಜನರಿಗೆ ಪ್ರತ್ಯೇಕ ಚುನಾವಣೆಗಳನ್ನು<br>ಏರ್ಪಡಿಸುವ ಬ್ರಿಟಿಷ್ ಯೋಜನೆಗಳನ್ನು<br>ವಿರೋಧಿಸಿ ಉಪವಾಸ ಸತ್ಯಾಗ್ರಹ<br>ಹರಿಜನ ವಾರ ಪತ್ರಿಕೆ ಆರಂಭ | |

| | |
|---|---|
| ಸೇವಾಗ್ರಾಮ ಆಶ್ರಮ ಸ್ಥಾಪನೆ | 1933 |
| ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ, ಮೂರು ಸಲ | |
| ಗಾಂಧೀಜಿಯ ಕೊಲೆಯ ಪ್ರಯತ್ನಗಳು | |
| ಅಖಿಲ ಭಾರತ ಗ್ರಾಮೋದ್ಯೋಗ ಸಂಘ ಆರಂಭ | 1934 |
| ವಾರ್ಧಾ ಸಮೀಪ ಸೇವಾಗ್ರಾಮ ಆಶ್ರಮ ಆರಂಭ | 1936 |
| ನಯೀ ತಾಲೀಂ ಶಿಕ್ಷಣ ಪದ್ಧತಿ ಪ್ರಾರಂಭ | 1937 |
| "ಭಾರತ ಬಿಟ್ಟು ತೊಲಗಿ" ಚಳುವಳಿ | 1942 |
| 21 ದಿನಗಳ ಉಪವಾಸ ಸತ್ಯಾಗ್ರಹ ಆರಂಭ | 1943 |
| ಫೆ. 22 ಕಸ್ತೂರಬಾ ಮರಣ, 23ರಂದು | |
| ಆಗಾಖಾನ್ ಅರಮನೆ ಆವರಣದಲ್ಲಿ ದಹನ | 1944 |
| ಕೊನೆಯ ಬಾರಿಗೆ ಆಗಾಖಾನ್ | |
| ಅರಮನೆಯಲ್ಲಿ ಸೆರೆವಾಸ | |
| ಕ್ಯಾಬಿನೆಟ್ ಮಿಷನ್, ಸಿಮ್ಲಾ ಸಮ್ಮೇಳನ | 1945 |
| ಕ್ಯಾಬಿನೆಟ್ ಅಂಗೀಕಾರ, ನೌಖಾಲಿ ಶಾಂತಿ | |
| ಪಾದಯಾತ್ರೆ | 1946 |
| ಭಾರತಕ್ಕೆ ಸ್ವಾತಂತ್ರ್ಯ ಮತ್ತು ದೇಶ ವಿಭಜನೆ | 1947 |
| ದೆಹಲಿಯಲ್ಲಿ ಕೋಮುವಾರು ಸೌಹಾರ್ದಕ್ಕಾಗಿ | |
| ಕೊನೆಯ ಉಪವಾಸ | 1948 |
| ಹಂತಕನ ಗುಂಡೇಟಿಗೆ ಹುತಾತ್ಮರು | 30-1-1948 |
| ರಾಜ್‌ಘಾಟದಲ್ಲಿ ದಹನ | 31-1-1948 |

# ಕಸ್ತೂರ್‌ಬಾ ಅವರ ಕಿರು ಜೀವನ ಚಿತ್ರಣ

| | |
|---|---|
| ಪೋರಬಂದರದಲ್ಲಿ ಜನನ | 11.04.1869 |
| ಗಾಂಧಿ ಅವರೊಡನೆ ವಿವಾಹ | 1888 |
| ದಕ್ಷಿಣ ಆಫ್ರಿಕಾಕ್ಕೆ ಹಡಗಿನಲ್ಲಿ ಪ್ರಯಾಣ | 1896 |
| ಗಾಂಧಿ ಅವರ ಮೇಲೆ ಆಕ್ರಮಣ ಖಂಡನೆ | 1897 |
| ಜೋಹನ್ಸ್‌ಬರ್ಗ್‌ನಲ್ಲಿ ಪ್ಲೇಗ್ ಪೀಡಿತರ ಸೇವೆ | 1904 |
| ಜೋಹನ್ಸ್‌ಬರ್ಗ್‌ನಲ್ಲಿ ಭಾರತೀಯ ಮಹಿಳೆಯರಿಗೆ ಸಂದೇಶ | 1909 |
| ಗುಜರಾತಿನ ಕೊಚರಬಾದಲ್ಲಿ ಆಶ್ರಮ ಸ್ಥಾಪನೆ | 1915 |
| ಗಾಂಧೀಜಿ ಅವರೊಡನೆ ಭಾರತದಾದ್ಯಂತ ಪ್ರವಾಸ | 1916 |
| ಗಾಂಧೀಜಿ ಅವರೊಡನೆ ಚಂಪಾರಣ್ಯ ಚಳುವಳಿಯಲ್ಲಿ ಭಾಗಿ | 1917 |
| ಸಬರಮತಿ ಆಶ್ರಮದ ನಿರ್ವಹಣೆಯ ಜವಾಬ್ದಾರಿ | 1920 |
| ಗಾಂಧೀಜಿ ಅವರೊಡನೆ ವಿದೇಶಿ ವಸ್ತ್ರಗಳ ನಾಶ | 1921 |
| ವಿದೇಶಿ ವಸ್ತ್ರ ಬಹಿಷ್ಕಾರ ಮತ್ತು ನೂಲು ನೇಯಲು ಕಲಿಕೆ | 1922 |
| ಅಸಹಕಾರ ಚಳುವಳಿಯಲ್ಲಿ ಭಾಗಿ | 1930 |
| ಭಾರತೀಯ ಮಹಿಳೆಯರಿಂದ ಚಳುವಳಿಗಾಗಿ ಕಸ್ತೂರ್‌ಬಾಗೆ ನೆರವು | 1931 |
| ಅಸಹಕಾರ ಚಳುವಳಿಗಾಗಿ 6 ವಾರಗಳ ಸೆರೆಮನೆ ವಾಸ | 1932 |
| ಬ್ರಿಟಿಷರಿಂದ ಬಂಧನ ಮತ್ತೆ ಸೆರೆವಾಸ | 1933 |
| ಸಬರಮತಿ ಆಶ್ರಮ ಮುತ್ತಿಗೆ | 1933 |

| | |
|---|---|
| ಗಾಂಧಿಯವರೊಡನೆ ಪೂನಾದ ಮುನಿಸಿಪಲ್ | |
| ಹಾಲ್‌ಗೆ ಕಾರಿನಲ್ಲಿ ಪ್ರಯಾಣಿಸುತ್ತಿದ್ದಾಗ | |
| ನಾಡಬಾಂಬ್ ಎಸೆತಕ್ಕೆ ಗುರಿ | 1934 |
| ಸೇವಾಗ್ರಾಮ ಆಶ್ರಮ ಸ್ಥಾಪನೆ | 1936 |
| ರಾಜ್‌ಕೋಟ್‌ನಲ್ಲಿ ಠಾಕೂರರ ದಬ್ಬಾಳಿಕೆ ವಿರುದ್ಧ | |
| ಮಹಿಳಾ ಹೋರಾಟಗಾರರಿಗೆ ನೆರವು | 1939 |
| ಬಂಧನ, ಕತ್ತಲ ಸೆರೆಮನೆವಾಸ | 1939 |
| ಕಸ್ತೂರ್‌ಬಾ ಕುರಿತು ಹರಿಜನ ಪತ್ರಿಕೆಯಲ್ಲಿ | |
| ಗಾಂಧೀಜಿ ಅವರ ಲೇಖನ ಪ್ರಕಟ | 1939 |
| ಕಾಂಗ್ರೇಸ್ ಅಧಿವೇಶನಕ್ಕೆ ಗಾಂಧೀಜಿ | |
| ಅವರೊಡನೆ ಮುಂಬೈಗೆ ಪಯಣ | 1942 |
| ಶಿವಾಜಿ ಪಾರ್ಕ್‌ನಲ್ಲಿ ಬೃಹತ್ ಸಾರ್ವಜನಿಕ | |
| ಸಮಾವೇಶದಲ್ಲಿ ಮಾಡಿದ ಭಾಷಣಕ್ಕಾಗಿ ಬಂಧನ | 1942 |
| ಸೆರೆಮನೆಯಲ್ಲಿ 2 ಬಾರಿ ಹೃದಯಾಘಾತ | 1944 |
| ಸೆರೆಮನೆಯಲ್ಲಿ 74ನೇ ವಯಸ್ಸಿನಲ್ಲಿ ನಿಧನ | 22.02.1944 |

## ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು

| | | |
|---|---|---|
| 1. | ಆರೋಗ್ಯ ರಹಸ್ಯ | 10–00 |
| 2. | ಕರ್ನಾಟಕದಲ್ಲಿ ಗಾಂಧೀ | 5–00 |
| 3. | ರಾಮನಾಮ | 6–00 |
| 4. | ಗಾಂಧೀ ಬಳಗದ ವಿದೇಶಿಯರು | 40–00 |
| 5. | ಆರೋಗ್ಯ | 8–00 |
| 6. | ಪ್ರಾರ್ಥನೆ | 40–00 |
| 7. | ಸತ್ಯಾಗ್ರಹ | 8–00 |
| 8. | ಮಹಿಳೆಯರಿಗಾಗಿ | 8–00 |
| 9. | ಪಂಚಾಯತ್ ರಾಜ್ | 12–00 |
| 10. | ಆದರ್ಶಗಳು | 12–00 |
| 11. | ನಮ್ಮ ಗಾಂಧೀ ತಾತ | 22–00 |
| 12. | ದೇವನಗರಿಯಲ್ಲಿ ಗಾಂಧೀ ಧ್ವನಿ | 2–00 |
| 13. | ನಮ್ಮ ಗಾಂಧೀ ತಾತ | 15–00 |
| 14. | ಹೋರಾಟ ಶ್ರೀ | 40–00 |
| 15. | ಮಹಾತ್ಮ ಗಾಂಧೀಜಿ ಅವರ ಜೀವನ ಮೈಲಿಗಲ್ಲುಗಳು | 3–00 |
| 16. | ಗಾಂಧೀಜಿ ಜೀವನ ಚರಿತ್ರೆ | 25–00 |
| 17. | ಕುವೆಂಪು ಕಂಡ ಗಾಂಧೀ | 25–00 |
| 18. | ಉಪ್ಪಿನ ಸತ್ಯಾಗ್ರಹ | 5–00 |
| 19. | ಹಿಂದ್ ಸ್ವರಾಜ್ | 50–00 |
| 20. | ಗಾಂಧೀ ಮತ್ತು ಆಧ್ಯಾತ್ಮಿಕ ಜೀವನ | 25–00 |
| 21. | ನನ್ನ ಕನಸಿನ ಭಾರತ | 30–00 |
| 22. | ಹಿಂದೂ ಧರ್ಮ | 25–00 |
| 23. | ಮಹಿಳೆಯರು | 63–00 |
| 24. | ಸ್ವಾತಂತ್ರ್ಯ | 42–00 |
| 25. | ಅಸ್ಪೃಶ್ಯತೆ | 45–00 |
| 26. | ಒಳ್ಳೆಯ ಜೀವನ | 60–00 |
| 27. | ಗಾಂಧೀ ಮತ್ತು ಕರ್ನಾಟಕ | 200–00 |

| | | |
|---|---|---|
| 28. | ಸತ್ಯ | 38–00 |
| 29. | ವಿದ್ಯಾರ್ಥಿಗಳಿಗಾಗಿ | 30–00 |
| 30. | ಸರ್ವೋದಯ | 30–00 |
| 31. | ಖಾದಿ ಗ್ರಾಮೋದ್ಯೋಗ | 58–00 |
| 32. | ನನ್ನ ಬಾಲ್ಯದ ನೆನಪುಗಳು | 52–00 |
| 33. | ಗ್ರಾಮರಾಜ್ಯ ಆಡಳಿತ | 5–00 |
| 34. | ನನ್ನ ಕನಸಿನ ಸ್ವರಾಜ್ಯ | 42–00 |
| 35. | ಹಾಸ್ಯ ಮತ್ತು ಗಾಂಧೀ | 44–00 |
| 36. | ನನ್ನ ಆದರ್ಶಗ್ರಾಮ | 5–00 |
| 37. | ಮಹಾತ್ಮ ಗಾಂಧೀ ವಿಚಾರಗಳು ಹಾಗೂ ವ್ಯವಸ್ಥಾಪನ ಪದ್ಧತಿ | 48–00 |
| 38. | ಸತ್ಯಾಗ್ರಹಿ | 40–00 |
| 39. | ಗ್ರಾಮದಾನ ಗ್ರಾಮ ಸ್ವರಾಜ್ಯ | 25–00 |
| 40. | ಗಾಂಧೀಜಿಯವರ ಪ್ರಾತ: ಸಾಯಂ ಪ್ರಾರ್ಥನೆ ಮತ್ತು ಭಜನೆ | |
| 41. | ಉಪ್ಪಿನ ಸತ್ಯಾಗ್ರಹ ಮತ್ತು ಮೈಲಾರ ಮಹಾದೇವ | 5–00 |
| 42. | ಸತ್ಯಾಗ್ರಹ | 5–00 |
| 43. | ಹಿಂದ್ ಸ್ವರಾಜ್ | 5–00 |
| 44. | ಆರೋಗ್ಯ | 5–00 |
| 45. | ಮಹಾತ್ಮ ಗಾಂಧಿ ಪ್ರಸ್ತುತತೆ | 10–00 |
| 46. | ಬಹುರೂಪಿ ಗಾಂಧಿ | 35–00 |
| 47. | ನಂದಿ ಗಿರಿಧಾಮದಲ್ಲಿ ಮಹಾತ್ಮ ಗಾಂಧಿ | 30–00 |
| 48. | ಕೃತಯುಗಿ ವಿನೋಬಾ ಭಾವೆ | 15–00 |
| 49. | ಮೋಹನ ತರಂಗ | 40–00 |
| 50. | ನಮ್ಮ ಗಾಂಧಿ ತಾತ | 22–00 |
| 51. | ಗೀತಾ ಪ್ರವಚನ | 80–00 |
| 52. | ಜೆ.ಪಿ. ಜೀವನ ಹಾದಿ | 45–00 |
| 53. | ಗಣ್ಯರು ಕಂಡಂತೆ ಗಾಂಧಿ | 20.0 |
| 54. | ಗೀತಾಮಾತೆ | 80.00 |

55. ಲೋಕ ಚಿಂತಕರು 145.00
56. ಕರ್ನಾಟಕದ ಕಸ್ತೂರ್‌ಬಾ ಯಶೋಧರಮ್ಮ ದಾಸಪ್ಪ 38.00
57. ಮಹದೇವ ದೇಸಾಯಿ 63.00
58. ಸಮಾಜವಾದ : ಗಾಂಧೀ ದೃಷ್ಟಿಕೋನ 15.00
59. ಮಹಾತ್ಮ ಗಾಂಧಿ ಮತ್ತು ಆಧ್ಯಾತ್ಮಿಕ ರಾಜಕಾರಣ 28.00
60. ಗಾಂಧೀ ಬಳಗದ ವಿದೇಶಿಯರು 89.00
61. ಮಹಾತ್ಮ ಗಾಂಧೀ ಮತ್ತು ಸ್ವಚ್ಛ ಭಾರತ 33.00
62. ಮಹಾತ್ಮ ಗಂಧೀಜಿ ಅವರ ಶೈಕ್ಷಣಿಕ ಸಿದ್ಧಾಂತ 80.00
63. ಹುಕ್ಕೇರಿಕರ ರಾಮರಾಯರು 110.00
64. ಮಹಿಳೆಯರು 63.00
65. ನನ್ನ ಬಾಲ್ಯದ ನೆನಪುಗಳು 52.00
66. ನಯೀ ತಾಲೀಂ 58.00
67. ಚರಕ ಸಂಹಿತೆ 68.00
68. ಸ್ವಚ್ಛ ಭಾರತಿ 82.00
69. ನಂದಿ ಗಿರಿಧಾಮದಲ್ಲಿ ಮಹಾತ್ಮ ಗಾಂಧಿ 66.00
70. ಗಾಂಧಿಯೊಳಗಿನ ಪತ್ರಕರ್ತ ಮರು ವೀಕ್ಷಣೆ 68.00
71. Nayi Talim 58.00
72. Temple & Mosque 10–00
73. Rastrapita Mahatma Gandhi 25–00
74. Swarajya of My Dreams 5–00
75. Gandhi My Grand Father 5–00
76. Grand Pa Gandhi 5–00
77. Relevance of Gandhi 20–00
78. Vinoba Sage of the Age 20.00
79. Kasturba 33.00
80. Mahatma Gandhi and his
Foreign Associates 87.00

## ಕರ್ನಾಟಕದಲ್ಲಿ ಗಾಂಧೀಜಿ ಭೇಟಿ ನೀಡಿದ ಸ್ಥಳಗಳು

- ಬೆಂಗಳೂರು — ದಿ. 08-05-1915
- ಬೆಳಗಾವಿ — ದಿ. 27-04-1916 ರಿಂದ ದಿ. 01-05-1916 ರವರೆಗೆ
- ಬಿಜಾಪುರ (ವಿಜಯಪುರ) — ದಿ. 05-05-1918 ರಿಂದ ದಿ. 06-05-1918 ರವರೆಗೆ
- ಕಾಸರಗೋಡು — ದಿ. 19-08-1920
- ಮಂಗಳೂರು — ದಿ. 20-08-1920
- ಬೆಂಗಳೂರು — ದಿ. 21-08-1920
- ನಿಪ್ಪಾಣಿ, ಚಿಕ್ಕೋಡಿ, ಹುಕ್ಕೇರಿ ಸಂಕೇಶ್ವರ, ಬೆಳಗಾವಿ — ದಿ. 08-11-1920
- ಬೆಳಗಾವಿ ಶಹಾಪುರ ಖಾನಾಪುರ, ನಂದಗಢ ಹಳ್ಯಾಳ — ದಿ. 09-11-1920
- ಧಾರವಾಡ — ದಿ. 10-11-1920
- ಹುಬ್ಬಳ್ಳಿ, ಗದಗ — ದಿ. 11-11-1920
- ಸಾಂಗಲಿ — ದಿ. 12-11-1920
- ಬಾಗಲಕೋಟೆ — ದಿ. 27-05-1921
- ಬಿಜಾಪುರ (ವಿಜಯಪುರ), ಸೊಲ್ಲಾಪುರ — ದಿ. 28-05-1921
- ಬಳ್ಳಾರಿ — ದಿ. 30-09-1921
- ಬೆಳಗಾವಿ — ದಿ. 21-12-1924 ರಿಂದ ದಿ. 30-12-1924 ರವರೆಗೆ
- ಗುಲ್ಬರ್ಗಾ — ದಿ. 22-02-1927 ರಿಂದ ದಿ. 23-02-1927 ರವರೆಗೆ
- ನಿಪ್ಪಾಣಿ — ದಿ. 27-03-1927 ರಿಂದ ದಿ. 31-03-1927 ರವರೆಗೆ
- ಬೆಳಗಾವಿ — ದಿ. 01-04-1927; ದಿ. 18-04-1027 ರಿಂದ ದಿ. 19-04-1927ರವರೆಗೆ
- ಬೆಂಗಳೂರು — ದಿ. 06-06-1927 ರಿಂದ

| | |
|---|---|
| | ದಿ. 13-07-1927 ರವರೆಗೆ |
| ● ತುಮಕೂರು | ದಿ. 14-07-1927 |
| ● ತುಮಕೂರು, ಮಧುಗಿರಿ | ದಿ. 15-07-1927 |
| ● ತುಮಕೂರು | ದಿ. 16-07-1927 |
| ● ಬೆಂಗಳೂರು | ದಿ. 17-07-1927 |
| ● ಬೆಂಗಳೂರು | ದಿ. 18-07-1927 |
| ● ಮೈಸೂರು | ದಿ.19-07-1927 ರಿಂದ<br>ದಿ. 21-07-1927 ರವರೆಗೆ |
| ● ಕೃಷ್ಣರಾಜಸಾಗರ, ಯಡತೊರೆ<br>ಶ್ರೀರಂಗಪಟ್ಟಣ, ದರಿಯಾದೌಲತ್ | ದಿ. 21-07-1927 |
| ● ಮೈಸೂರು | ದಿ. 23-07-1927 |
| ● ಬೆಂಗಳೂರು | ದಿ. 24-07-1927 ರಿಂದ<br>ದಿ. 30-07-1927 ರವರೆಗೆ |
| ● ಕ್ಲೊಸ್‌ಪೇಟೆ (ರಾಮನಗರ)<br>ಕಾನಕಾನಹಳ್ಳಿ (ಕನಕಪುರ) | ದಿ. 31-07-1927 |
| ● ಬೆಂಗಳೂರು | ದಿ. 01-08-1927 |
| ● ಅರಸೀಕರೆ, ಹಾಸನ | ದಿ. 02-08-1927 |
| ● ಹಾಸನ | ದಿ. 03-08-1927 |
| ● ಹಾಸನ, ಹೊಳೆನರಸೀಪುರ | ದಿ. 04-08-1927 |
| ● ಬೆಂಗಳೂರು | ದಿ. 05-08-1927 ರಿಂದ<br>ದಿ. 11-08-1927 ರವರೆಗೆ |
| ● ದಾವಣಗೆರೆ | ದಿ. 12-08-1927 |
| ● ಹರಿಹರ, ಹೊನ್ನಾಳಿ<br>ಮಲೆಬೆನ್ನೂರು | ದಿ. 13-08-1927 |
| ● ಶಿವಮೊಗ್ಗ | ದಿ. 14-08-1927 ರಿಂದ<br>ದಿ. 15-08-1927 ರವರೆಗೆ |
| ● ಆಯ್ಯನೂರು, ಕುಂಸಿ, ಸಾಗರ<br>ಶಿವಮೊಗ್ಗ | ದಿ. 16-08-1927 |
| ● ಶಿವಮೊಗ್ಗ, ತೀರ್ಥಹಳ್ಳಿ<br>ಮಂದಗದ್ದೆ, ರಾಜನೂರು | ದಿ. 17-08-1927 |
| ● ಭದ್ರಾವತಿ, ತರೀಕೆರೆ<br>ಬೀರೂರು, ಕಡೂರು | ದಿ. 18-08-1927 |

| | |
|---|---|
| • ಚಿಕ್ಕಮಗಳೂರು | ದಿ. 19-08-1927 |
| • ಬೇಲೂರು, ಹಳೇಬೀಡು<br>ಅರಸೀಕೆರೆ | ದಿ. 20-08-1927 |
| • ತಿಪಟೂರು | ದಿ. 21-08-1927 |
| • ಬೆಂಗಳೂರು | ದಿ. 22-08-1927 |
| • ಬೆಂಗಳೂರು | ದಿ. 23-08-1927 |
| • ಹೊಸೂರು, ಸೂಳಗಿರಿ<br>ಕೃಷ್ಣಗಿರಿ | ದಿ. 24-08-1927 |
| • ಬೆಂಗಳೂರು | ದಿ. 25-08-1927 ರಿಂದ<br>ದಿ. 30-08-1927 ರವರೆಗೆ |
| • ಹಿಂದೂಪುರ, ವಿಧುರಾಶ್ವತ್ಥ<br>ಗೌರಿಬಿದನೂರು<br>ದೊಡ್ಡಬಳ್ಳಾಪುರ, ತುಮಕೂರು<br>ತ್ಯಾಮಗೊಂಡ್ಲು, ನೆಲಮಂಗಲ<br>ಬೆಂಗಳೂರು, ಮೈಸೂರು | ದಿ. 04-01-1934 |
| • ತಗಡೂರು, ಬದನವಾಳ<br>ನಂಜನಗೂಡು, ಮೈಸೂರು | ದಿ. 05-01-1934 |
| • ಮಂಡ್ಯ, ಚನ್ನಪಟ್ಟಣ, ರಾಮನಗರ<br>ಕನಕಪುರ, ಬಿಡದಿ, ಕೆಂಗೇರಿ | ದಿ. 06-01-1934 |
| • ಬೆಂಗಳೂರು | ದಿ. 07-01-1934 ರಿಂದ<br>ದಿ. 09-01-1934 ರವರೆಗೆ |
| • ಪೊನ್ನಂಪೇಟೆ, ಹುದಿಕೇರಿ | ದಿ. 22-02-1934 |
| • ವಿರಾಜಪೇಟೆ, ಬೆಳ್ಳೂರು<br>ಸೋಮವಾರ ಪೇಟೆ, ಗುಂಡುಕಟ್ಟೆ | ದಿ. 23-02-1934 |
| • ಮಡಿಕೇರಿ, ಸಂಪಾಜೆ, ಸುಳ್ಯ<br>ಪುತ್ತೂರು, ಉಪ್ಪಿನಂಗಡಿ<br>ವಿಠಲಗಬ್ಬ, ಕಲ್ಲಡ್ಕ, ಪಾಣೆ<br>ಮಂಗಳೂರು, ಬಂಟ್ವಾಳ, ಮಂಗಳೂರು | ದಿ. 24-02-1934 |
| • ಮಂಗಳೂರು, ಗುರುಪುರ, ಬಜ್ಪೆ<br>ಯಕ್ಕೂರು, ಕಟೀಲು, ಕಿನ್ನಗೋಳಿ<br>ಮೂಲ್ಕಿ, ಪಡುಬಿದ್ರಿ, ಕಟಪಾಡಿ<br>ಗುರುಪುರ, ಉದ್ಯಾವರ<br>ಉಡುಪಿ, ಬ್ರಹ್ಮಾವರ, ಸಿದ್ದಾಪುರ | ದಿ. 25-02-1934 |

- ಕುಂದಾಪುರ ದಿ. 26-02-1934
- ಕುಂದಾಪುರ, ಭಟ್ಕಳ ಹೊನ್ನಾವರ, ಕಾರವಾರ ದಿ. 27-02-1934
- ಕಾರವಾರ, ಕುಮುಟಾ, ಅಂಕೋಲ ಚಂದಿಯಾ, ಶಿರಸಿ ದಿ. 28-02-1934
- ಶಿರಸಿ, ಸಿದ್ದಾಪುರ, ದಾಸನಕೊಪ್ಪ ಇಸಲೂರು, ಏಕಾಂಬಿ, ಆಲೂರು ಬ್ಯಾಡಗಿ, ಮೋಟೆಬೆನ್ನೂರು ದಿ. 01-03-1934
- ಹಾವೇರಿ, ರಾಣೆಬೆನ್ನೂರು, ಹರಿಹರ ದಾವಣಗೆರೆ, ಹರಪನಹಳ್ಳಿ, ಕೊಟ್ಟೂರು ಕೂಡ್ಲಿಗೆ, ದುಗ್ಗಾವತಿ, ಕಣಿವೆಹಳ್ಳಿ ಸೊಂಡೂರು ದಿ. 02-03-1934
- ಸೊಂಡೂರು, ಬಳ್ಳಾರಿ, ಹೊಸಪೇಟೆ ಭಾನಾಪುರ, ಗದಗ, ಜಕ್ಕಲಿ, ಹುಬ್ಬಳ್ಳಿ ದಿ. 03-03-1934
- ಹುಬ್ಬಳ್ಳಿ, ಧಾರವಾಡ, ಅಮ್ಮಿನಭಾವಿ ಹಿರೇಉಳ್ಳಗೇರಿ, ಬೈಲಹೊಂಗಲ ಉಪ್ಪಿನ, ಬೆಟಗೇರಿ, ಸೌಂದತ್ತಿ ಸಂಪಗಾಂವ್, ಹೊಸೂರು, ಬೆಳಗಾವಿ ದಿ. 04-03-1934
- ಬೆಳಗಾವಿ ದಿ. 05-03-1934
- ಬೆಳಗಾವಿ ದಿ. 06-03-1934
- ಬೆಳಗಾವಿ, ಯಮಕನಮರಡಿ, ವಂಟಮರಿ ಹುಕ್ಕೇರಿ, ಗೋಕಾಕ, ಸಂಕೇಶ್ವರ ನವಲೀಹಾಳ, ಚಿಕ್ಕೋಡಿ, ಅಂಕಲಿ ದಿ. 07-03-1934
- ಶೆಡಬಾಳ, ಬನಹಟ್ಟಿ, ಅಥಣಿ ಬಿಜಾಪುರ (ವಿಜಯಪುರ), ತಿಕೋಟ, ತೊರವಿ ಇಳಕಲ್ ದಿ. 08-03-1934
- ನಂದಿ ಬೆಟ್ಟ 10-05-1936 ರಿಂದ 30-05-1936 ರವರೆಗೆ
- ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಚಿಂತಾಮಣಿ, ಕೋಲಾರ, ಬಂಗಾರ ಪೇಟೆ, ಕೆ.ಜಿ.ಎಫ್ 31-05-1936
- ಬೆಂಗಳೂರು 01-06-1936 ರಿಂದ 12-06-1936 ರವರೆಗೆ
- ಬೆಳಗಾವಿ ಜಿಲ್ಲೆಯ ಹುದಲಿ 16-04-1937 ರಿಂದ 21-04-1937ರವರೆಗೆ

# ಗಾಂಧಿ ಅವರ ನೀತಿ ಮಾರ್ಗ ಸೂಚಿ

## ಏಕಾದಶ ವ್ರತಗಳು

| | |
|---|---|
| ಸತ್ಯ | **Truth** |
| ಅಹಿಂಸೆ | **Ahimsa or Love** |
| ಅಸ್ತೇಯ (ಕದಿಯದಿರುವುದು) | **Non-Stealing** |
| ಬ್ರಹ್ಮಚರ್ಯ | **Brahmacharya or Chastity** |
| ಅಸಂಗ್ರಹ (ಅಪರಿಗ್ರಹ) | **Non-Possession** |
| ಶರೀರ ಶ್ರಮ | **Physical Labour** |
| ಅಸ್ವಾದ (ನಾಲಿಗೆ ಚಪಲ) | **Control on the Palate** |
| ಸರ್ವತ್ರ ಭಯವರ್ಜನ (ಅಭಯ) | **Fearlessness** |
| ಸರ್ವಧರ್ಮ ಸಮಾನತ್ವ | **Equality of Religion** |
| ಸ್ವದೇಶಿ | **Swadeshi** |
| ಸ್ಪರ್ಶ ಭಾವನೆ (ಅಸ್ಪೃಶ್ಯತಾ ನಿವಾರಣೆ) | **Removal of Untouchability** |

---

## ಏಳು ಸಾಮಾಜಿಕ ಪಾತಕಗಳು Seven Social Sins

| | |
|---|---|
| ತತ್ವರಹಿತ ರಾಜಕಾರಣ | **Politics without Principles** |
| ದುಡಿಮೆ ಇಲ್ಲದ ಸಂಪತ್ತು | **Wealth without Work** |
| ಆತ್ಮಸಾಕ್ಷಿ ಇಲ್ಲದ ಸಂತೋಷ | **Pleasure without Conscience** |
| ಚಾರಿತ್ರ್ಯವಿಲ್ಲದ ಶಿಕ್ಷಣ | **Education without Character** |
| ನೀತಿ ಇಲ್ಲದ ವ್ಯಾಪಾರ | **Commerce without Morality** |
| ಮಾನವೀಯತೆ ಇಲ್ಲದ ವಿಜ್ಞಾನ | **Science without Humanity** |
| ತ್ಯಾಗ ಇಲ್ಲದ ಪೂಜೆ | **Worship without Sacrifice** |

– ಮಹಾತ್ಮ ಗಾಂಧೀಜಿ

## ಹದಿನೆಂಟು ರಚನಾತ್ಮಕ ಕಾರ್ಯಗಳು

## 18 CONSTRUCTIVE PROGRAMMES

| | |
|---|---|
| ಮತೀಯ ಐಕ್ಯತೆ | **Communal Unity** |
| ಅಸ್ಪೃಶ್ಯತಾ ನಿವಾರಣೆ | **Removal of Untouchability** |
| ಪಾನನಿರೋಧ | **Prohibition** |
| ಖಾದಿ | **Khadi** |
| ಇತರೆ ಗ್ರಾಮೋದ್ಯೋಗಗಳು | **Other village industries** |
| ಗ್ರಾಮ ನೈರ್ಮಲ್ಯ | **Village Sanitation** |
| ಮೂಲ ಶಿಕ್ಷಣ | **Basic Education** |
| ವಯಸ್ಕರ ಶಿಕ್ಷಣ | **Adult Education** |
| ಮಹಿಳಾ ಸಬಲೀಕರಣ | **Women Empowerment** |
| ಆರೋಗ್ಯ ಮತ್ತು ಶುಚಿತ್ವ ಶಿಕ್ಷಣ | **Hygiene & Health Education** |
| ಪ್ರಾದೇಶಿಕ ಭಾಷೆ | **Provincial Languages** |
| ರಾಷ್ಟ್ರಭಾಷೆ | **National Language** |
| ಆರ್ಥಿಕ ಸಮಾನತೆ | **Economic Equality** |
| ರೈತರ ಸಬಲೀಕರಣ | **Empowerment of Farmers** |
| ಕಾರ್ಮಿಕರ ಸಬಲೀಕರಣ | **Empowerment of Labours** |
| ಆದಿವಾಸಿ ಸಬಲೀಕರಣ | **Tribal Empowerment** |
| ಕುಷ್ಠರೋಗ ನಿರ್ಮೂಲನೆ | **Cure of Lepracy** |
| ವಿದ್ಯಾರ್ಥಿಗಳು | **Students** |

ಎಚ್.ಎಸ್. ದೊರೆಸ್ವಾಮಿ ಅವರ 104 ವರ್ಷದ ವಯೋಮಾನದಲ್ಲಿ ಬರವಣಿಗೆ ಮತ್ತು ಮೂರು ಹಂತದ ತಿದ್ದುಪಡಿಗಳನ್ನು ಸ್ವಂತ ಕೈಬರಹದಲ್ಲಿ ಮಾಡಿರುವುದು ಅತ್ಯಾಶ್ಚರ್ಯಕರವಾದ ವಿಷಯವಾಗಿದೆ. ದೊರೆಸ್ವಾಮಿ ಅವರು ಯೌವ್ವನದ ದಿನಗಳ ಹೋರಾಟ, ಸಾರ್ವಜನಿಕ ಜೀವನದ ಪ್ರತಿ ಘಟ್ಟಗಳನ್ನು ಕರಾರುವಾಕ್ಕಾಗಿ ದಿನಾಂಕ ಮತ್ತು ಸ್ಥಳ ಹಾಗೂ ಭಾಗಿಗಳಾದವರ ಹೆಸರುಗಳೊಂದಿಗೆ ಕೃತಿರೂಪಕ್ಕೆ ತಂದಿರುವುದು ಸಖೇದಾಶ್ಚರ್ಯಕರವಾದುದಾಗಿದೆ. ಈ ಕೃತಿಯಲ್ಲಿ ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕದ ಪಾತ್ರ, ಇಲ್ಲಿ ನಡೆದ ಚಳುವಳಿಗಳು, ಜನಸಾಮಾನ್ಯರ ಪಾತ್ರ, ಹೋರಾಟವನ್ನು ಮುನ್ನೆಡೆಸಿದ ಹಿರಿಯರು ಹಾಗೂ ಯುವಕರು ಮತ್ತು ಮಹಿಳೆಯರ ಭಾಗಿತ್ವವನ್ನು ವಿವರವಾಗಿ ವಿವರಿಸಲಾಗಿದೆ.

**ಡಾ. ವೂಡೇ ಪಿ. ಕೃಷ್ಣ**

ಭಾರತದ ಗಣರಾಜ್ಯದಲ್ಲಿ ಒಂದಾದ ಕರ್ನಾಟಕದ ಜನರ ಪಾತ್ರ ಮತ್ತು ಮಹಿಳೆಯರ ಪಾಲ್ಗೊಳ್ಳುವಿಕೆಯ ಚಿತ್ರಣವನ್ನೂ ಇಲ್ಲಿ ದಾಖಲಿಸಲಾಗಿದೆ. ಇದರೊಂದಿಗೆ ಅವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗಿಯಾದ ವಿವರಣೆಯನ್ನು ಎಲ್ಲಿಯೂ ವಿಜೃಂಭಿಸದೆ ಎಲ್ಲರೊಂದಿಗೆ ಸಹಭಾಗಿಯಾದ ವಿವರಣೆಗಳು ಇಲ್ಲಿ ದಾಖಲಾಗಿದೆ. ಇದು ಲೇಖಕರ, ನಿಸ್ವಾರ್ಥತೆ, ಎಲ್ಲರೊಳಗೊಂದಾಗುವ ಸರಳ ಭಾವದ ಅಭಿವ್ಯಕ್ತಿಯಾಗಿದೆ.

ಈ ಕೃತಿಯು ಒಂದು ಚರಿತ್ರಾರ್ಹ ದಾಖಲೆ. ಇದು ಶಾಲಾ-ಕಾಲೇಜುಗಳಲ್ಲಿ ಪಠ್ಯ ಪುಸ್ತಕವಾಗಿಸುವ, ಪಠ್ಯದ ಭಾಗವಾಗಿಸುವಂಥಹದಾಗಿದೆ.

**ಇಂದಿರಾ ಕೃಷ್ಣಪ್ಪ**

**ಕರ್ನಾಟಕ ಗಾಂಧೀ ಸ್ಮಾರಕ ನಿಧಿ**

**ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು**